# ಸಂಚಯ

ಸಾಂಸ್ಕೃತಿಕ ಸಂಕಲನ
(ದ್ವೈಮಾಸಿಕ)
(ಖಾಸಗಿ ಪ್ರಸಾರಕ್ಕಾಗಿ)

ಸಂಪುಟ : 6
ಸಂಚಿಕೆ : 1
ನವೆಂಬರ್-ಡಿಸೆಂಬರ್ 1992

ಸಂಪಾದನೆ/ಪ್ರಕಟಣೆ : ಸಂಚಯ ಬಳಗ

ವಾರ್ಷಿಕ ಚಂದಾ : ರೂ. 45-00

ಮುಖಪುಟದ ಚಿತ್ರ : ಕೆ. ಕೆ. ಹೆಬ್ಬಾರ್ ಅವರ ರೇಖಾಕೃತಿ

ಕೃಪೆ : ಲಲಿತ ಕಲಾ ಅಕಾಡೆಮಿ

---

ಈ ಸಂಚಿಕೆಯನ್ನ ಕೆಲವು ಆಸಕ್ತರಿಗೆ ಪ್ರಾಯೋಗಿಕ ಚಂದಾದಾರರೆಂದು ಉಚಿತ ವಾಗಿ ಕಳುಹಿಸುತ್ತಿದ್ದೇವೆ, ನಿಮಗೆ ಇಷ್ಟವಾದಲ್ಲಿ ಚಂದಾದಾರರಾಗಲು ಕೋರಿಕೆ, ನಮ್ಮ ಓದುಗರು ಚಂದಾ ನವೀಕರಿಸಬೇಕೆಂದು ಮನವಿ, ಈ ಸಂಚಿಕೆಯ ಜೊತೆಗಿರುವ ಪೋಸ್ಟ್ ಕಾರ್ಡಿನಲ್ಲಿ ದಯವಿಟ್ಟು ನಿಮ್ಮ ಅನಿಸಿಕೆ ತಿಳಿಸಿ, ಪತ್ರಿಕೆ ರೂಪಿಸುವಲ್ಲಿ ಅವು ಸಹಕಾರಿ ಯಾದೀತು.

ಈ ಸಂಚಿಕೆಯಲ್ಲಿ ಕಲಾವಿದ ಎ. ಶ್ರೀಧರಮೂರ್ತಿ ಅವರ ಲಿನೋಕಟ್ ಕೃತಿ ಸಂಚಯದ ಓದುಗರಿಗೆ ಉಚಿತ ! (ಕೊನೆಯ ಪುಟ ಗಮನಿಸಿ)

ತಮ್ಮ ಕಲಾಕೃತಿಯನ್ನು ಬಳಸಲು ನಮಗೆ ಸಹಕರಿಸಿದ ಎ. ಶ್ರೀಧರಮೂರ್ತಿ ಅವರಿಗೆ ಸಂಚಯದ ಕೃತಜ್ಞತೆಗಳು.

—ಸಂಪಾದಕ

---

ಸಂಚಯದ ವಿಳಾಸ : 24/ಡಿ, 17ನೇ ಮುಖ್ಯರಸ್ತೆ
ಮುನೇಶ್ವರ ಬ್ಲಾಕ್, ಬನಶಂಕರಿ 3ನೇ ಹಂತ
ಬೆಂಗಳೂರು-560 026

ಕಾವ್ಯ

# ಅವರು

ಪ್ರತಿಭಾ ನಂದಕುಮಾರ್
68 'A', 4ನೇ ಬ್ಲಾಕ್ (ಪಶ್ಚಿಮ), ಜಯನಗರ, ಬೆಂಗಳೂರು-560 011

ಸಾಧ್ಯವಿದೆ
    ಆಗುತ್ತಿಲ್ಲ.

ಮಳೆಗೆ ತೊಯ್ದ ಹೂ.
ಗೂಡಿನಲ್ಲಿ ಬಚ್ಚಿಟ್ಟುಕೊಂಡ
    ಇರುವೆ ಸಂಸಾರ.
ಕಾಡು ಕಿಚ್ಚಲ್ಲ
    ಮುಂಜಾವಿನ ಬೆಳುದಿಂಗಳು.
ಕೆನ್ನೆ ಮೇಲೆ ಒದ್ದೆ ಗುರುತು
    ಕಣ್ಣೀರು, ಮುತ್ತು, ಜೊಲ್ಲು.

ತಪ್ಪು ತಪ್ಪಾಗಿ ಅಂಟಿಸಿದ ಗೊಂಬೆ
ಹಾಳು ಉಗ್ರನರಸಿಂಹನ ಹಾಗೆ
ಎಲ್ಲೋ ಕಾಣಿಸುವ ಮುರಿದ ಸಾಲಂಕೃತ ಕೈ
    ಇದೇ ಭಂಗಿ.

ಬಯಕೆ. ಬಿಡದ ಗಾಂಭೀರ್ಯ,
ವಯಸ್ಸಿನ ಕೋಟೆ, ಲೋಕಾರೂಢಿಯ ಕಡಿವಾಣ.

ತಣ್ಣನೆಯ ಮರಳ ಹಾಸು
    ಬಾಕಿ ಎಲ್ಲ ಕನಸು.

ನಿದ್ದೆ ಬರದಿರಲು ಕಾರಣ ನೂರಾರು
ಏನಿಲ್ಲದಿದ್ದರೂ ಕೊನೆಗೆ
ಅವರು ಬರೆಯಬಹುದಾದ ಸಾಲು.

## ಪ್ರೀತಿ ಬೇಕು

---

ಸುಧಾಶರ್ಮ ಚವತ್ತಿ
'ಸಂಯುಕ್ತ ಕರ್ನಾಟಕ' ಕೊಪ್ಪಿಕಾರ್ ರಸ್ತೆ, ಹುಬ್ಬಳ್ಳಿ–580 020

ಎಳೆ ಬಿಸಿಲು ಚೆಲ್ಲಿದ—
ಅಂಗಳದಿ ಹುಡುಗಿ ಹಿಡಿದ,
ಹುಡಿಯಿಂದ ಹುಂಡುಂಡಾಗಿ
ಬಿಡಿಸಿಕೊಂಡು, ಬಣ್ಣ ತುಂಬಿಕೊಳ್ಳುವ,
ರಂಗವಲ್ಲಿಯ ಹಾಗೆ—
ಒಳಗಿನ ಪ್ರೀತಿಗಳ ಸಾಲುಗಳಲ್ಲಿ ಕತ್ತರಿಸಿ,
ಕವಿತೆ ಚದ್ದರ ಹೊದ್ದಿಸಿ ಮಲಗಿಸಬೇಕು.
ಕವಿತೆ ಬರೆಯಲು—
ಭೂಮಿ ಎದೆ ಸೀಳಿ ನೆಗೆದು,
ಚಿವುಟಿದರೂ, ಚಿಗುರುವ,
ಎಲೆತೊಟ್ಟು, ಇಬ್ಬನಿ ಹನಿಸುವ,
ಹೂವಿನಂತ ಪ್ರೀತಿ ಬೇಕು.

ಚಿಗುರು ಬೆರಳುಗಳಲ್ಲಿ,
ಹುರಿದ ಮೀನನು ತಂದು,
ಸಾಕು ಎಂದರೂ ಮತ್ತೆ ಬಡಿಸುವ
ಇವಳ ನಗು, ಮನೆ ತುಂಬಾ ತೂಗುಬಿಟ್ಟ ಚಂದ್ರಮನ ಹಾಗೆ.
ನನ್ನ ಖಾಲಿ ಕಿಸೆ ತುಂಬಾ ನಿಟ್ಟುಸಿರು.
ಬದುಕುವುದಕ್ಕೆ—
ಮುಸ್ಸಂಜೆಯಲ್ಲಿ ಕಾಯುತ್ತ,
ಬಾಗಿಲುದ್ದಕ್ಕೂ ನಿಂತ,
ಒದ್ದೆ ಕಣ್ಣುಗಳ ಪ್ರೀತಿ ಬೇಕು.

## 3

ನಿಂತ ನೆಲವೆ ಜೋಕಾಲಿಯಾಗಿ,
ನಿಲ್ಲಲು, ಗಟ್ಟಿನೆಲ ಹುಡುಕಿ,
ಕಂಡ ಕಂಡವರೆದೆ ತಟ್ಟಿ ನಗು ಹುಡುಕಿ,
ಮಿಡಿದ ಕಂಬನಿಯ ಮೇಲೆ,
ಗಟ್ಟಿ ಹೆಜ್ಜೆಯನಿಟ್ಟು. ಮುಖವೆತ್ತಿ,
ಸಲೀಸಾಗಿ, ಹೋಗಿ ಬಿಡಬೇಕು.
ಖುಷಿ ತುಂಬಿಸಿಕೊಳ್ಳುವುದಕ್ಕೆ—
ಯಾರದ್ದೋ, ಅಮ್ಮನ ಪುಕ್ಕದಡಿಯಿಂದ,
ನೆಗೆದು, ಮಾಮರದಲ್ಲಿ ಕೂತು,
ಯುಗ ಯುಗಗಳುದ್ದಕ್ಕೂ ಹಾಡುತ್ತ,
ಕಾಯುವ
ಕೋಗಿಲೆಯಂತ ಪ್ರೀತಿ ಬೇಕು.

ಹಾಳು ಬಾವಿಯೊಳದಿಂದ,
ಎದ್ದು ಬರುವ ಬಾವಲಿಯ ಹಾಗೆ,
ಅವರು ನಗುತ್ತಾರೆ, ಅಸಹ್ಯವಾಗಿ,
ವಾಂತಿ ಮಾಡಿಕೊಂಡಂತೆ.
ತಲೆ ಜಪ್ಪಿ ಜಪ್ಪಿ ಅವಳು ಸಾವನ್ನು ಕರೆಯುತ್ತಾಳೆ.
ಯಾರೋ ಬಂದು ಹೃದಯದ ಕಸ ಗುಡಿಸುತ್ತಾರೆ.
ಮನುಷ್ಯರನ್ನು ಸಹಿಸಿಕೊಳ್ಳುವುದಕ್ಕೆ,
ಗಲ್ಲಿಗೇರಿಸಿದ ಜಗತ್ತನ್ನೇ ಕ್ಷಮಿಸಿದ,
ಯೇಸು ವಿನಂತ ಪ್ರೀತಿ ಬೇಕು.



ಪ್ರೇಮಬೀಜ ಮೂಲ ನನಗೆ
ಪ್ರೇಮಬೀಜ ಫಲದ ಗೊನೆಗೆ

—ಬೇಂದ್ರೆ

# ಗ್ಯಾಲರಿಯಲ್ಲಿ ಕೂಡಿ ಮಾತನಾಡಿದ್ದು

**ರವಿಕುಮಾರ ಕಾಶಿ**

ನಂ. 56(14) ಗರುಡನಿವಾಸ (ಮಹಡಿ) 6ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3

ಈಗ್ಗೆ ಕೆಲವು ದಿನಗಳ ಹಿಂದೆ, ಸಾಕ್ಷಿ ಗ್ಯಾಲರಿಯಲ್ಲಿ ಸಿ.ಕೆ. ಬೋಸ್‌ನ ಪ್ರದರ್ಶನ ಸಮಾರಂಭದಲ್ಲಿ ಷಾಜು ಜಾರ್ಜ್ (SHAJU GEORGE) ಎಂಬ ಪ್ರಾಚೀನ ಕಲಾಸಂಗ್ರಹಕಾರ ಮತ್ತು ಮಾರಾಟಗಾರನೊಬ್ಬನ ಪರಿಚಯವಾಯ್ತು. ವಯಸ್ಸು ಕಿರಿದಾದರೂ ಅಪಾರ ಅನುಭವದ, ವಿದೇಶಗಳನ್ನ ತಿರುಗಿ ಕಂಡ ವ್ಯಕ್ತಿ. ದಕ್ಷಿಣ ಕನ್ನಡ ಮತ್ತು ಕೇರಳದ ಮುಖವಾಡಗಳು ಹಾಗೂ ಮತ್ತಿತರ ಕಲಾಕೃತಿಗಳ ಸಂಗ್ರಹದಲ್ಲಿ ಪರಿಣತ.

ಕಳೆದ ಕೆಲವೇ ದಿನಗಳ ಹಿಂದೆ ಲಂಡನ್ನಿನ ಸೋತ್‌ಬೇ (Sothbey) ಅವರು ದೆಹಲಿಯಲ್ಲಿ ನಡೆಸಿದ ಭಾರತೀಯ ಪ್ರಾಚೀನ ಕಲಾಕೃತಿಗಳ ಹರಾಜಿನ ಬಗ್ಗೆ ಮಾತು ಬಂತು. ನಮ್ಮ ಅಮೂಲ್ಯ ಕಲಾಕೃತಿಗಳು ಭಾರತದ ಗಡಿ ದಾಟಿ ಇತರ ದೇಶಗಳನ್ನು ಸೇರುತ್ತಿರುವುದರ ಬಗ್ಗೆ, ನಮ್ಮ ಕಲಾಕೃತಿಗಳು ಪರಾಧೀನವಾಗುವುದು ಭಾರತಕ್ಕೆ ಸಾಂಸ್ಕೃತಿಕ ನಷ್ಟವಲ್ಲವಾ-ಎಂಬ ಪ್ರಶ್ನೆ, ಆತಂಕ ವ್ಯಕ್ತವಾಯಿತು. ಇದಕ್ಕೆ ಜಾರ್ಜ್‌ನ ಉತ್ತರ—ಮೊದಲನೆಯದಾಗಿ ನೋಡಿದಲ್ಲಿ ಭಾರತ, ಇಂಗ್ಲೆಂಡ್ ಹೀಗೆ ದೇಶಗಳ ನಡುವೆ ಸಾಂಸ್ಕೃತಿಕ ಗಡಿಗಳೆಂಬುದಿಲ್ಲ. ನಮಗೆ ತಿಳಿದಿರುವುದು ರಾಜಕೀಯ ಗಡಿ ಮಾತ್ರ, ಸಾಂಸ್ಕೃತಿಕವಲ್ಲ. ರಾಜಕೀಯ ಗಡಿಗಳನ್ನೂ ಮೀರಿ ಒಂದು ಪ್ರದೇಶದ ಸಂಸ್ಕೃತಿ ಮತ್ತೊಂದು ಸಂಸ್ಕೃತಿಯನ್ನು ಪ್ರಭಾವಿಸಿದೆ, ಇಂತಹ ಪ್ರಭಾವಗಳು ಹಿಂದೆಯೂ ಒಂದೆಡೆಯಿಂದ ಮತ್ತೊಂದೆಡೆಗೆ ಹರಿದಿದೆ, ಹರಿಯುತ್ತಲೂ ಇದೆ. ಹೀಗಾಗಿ ಇದು ಸಂಪೂರ್ಣ ನಮ್ಮದು, ಇಲ್ಲಿ ಈ ಗೆರೆಯಿಂದ ನಿಮ್ಮದು ಎಂಬಂತಹ ಖಚಿತ ರೂಪಗಳನ್ನು ಕೊಡುವುದು ಕಷ್ಟವಾಗುತ್ತದೆ. ಒಂದರ್ಥದಲ್ಲಿ ಕಲಾಕೃತಿಗಳು ನಿಜಕ್ಕೂ ಒಂದು ವಿಶ್ವಸಂಸ್ಕೃತಿಯ ಸ್ವತ್ತು.

ಅದನ್ನು ಮಮತೆಯಿಂದ, ಆಸ್ಥೆಯಿಂದ ಯಾರು ನೋಡಿಕೊಳ್ಳಬಲ್ಲರೋ ಅವರಲ್ಲಿ ಇರುವುದೇ ಒಳಿತು. ಭಾರತದಲ್ಲಿ ಹಣ ಇಲ್ಲ ಎಂದಲ್ಲ, ಅದನ್ನು ಕಲಾಕೃತಿ ಸಂಗ್ರಹದಲ್ಲಿ ತೊಡಗಿಸುವವರು ಕಮ್ಮಿ. ಅದೇ ಯುರೋಪಿನ, ಅಮೇರಿಕದ,

ಜಪಾನಿನ ಕೆಲಜನ ತಮ್ಮೆಲ್ಲವನ್ನು ಒತ್ತೆಯಿಟ್ಟಾದರೂ ಇಷ್ಟಪಟ್ಟ ಕಲಾಕೃತಿ (ಪ್ರಾಚೀನವೋ ಸಮಕಾಲೀನವೊ) ಕೊಂಡಾರು. ಅವರ ಕಲಾಪ್ರೇಮ ಶಿಕ್ಷಣ ಅಂತಹುದು. ಇಂತಿರುವಾಗ ಅವು ಗಡಿದಾಟಿ ಅಲ್ಲಿನ ಕಲಾರಸಿಕರ ಕೈಗೆ ಸಿಕ್ಕರೂ ಅದರಿಂದ ಭಾದಕವೇನಿಲ್ಲ. ಬದಲಾಗಿ ಒಳಿತೇ ಆದೀತು ಎನ್ನುವುದು ಅವನ ಅಂಬೋಣ.

ನಮ್ಮ ಸರ್ಕಾರಿ ಮ್ಯೂಸಿಯಮ್‌ಗಳ, ಅಕಾಡೆಮಿಗಳ ಸಂಗ್ರಹದಲ್ಲಿ ಕಲಾಕೃತಿಗಳು ಸಾಮಾನ್ಯ ಜನರಿಗೂ ನೋಡಲು ಸಿಕ್ಕಾವು ಎಂಬುದು ಸತ್ಯ. ಆದರೆ ಯಾವ ಸ್ಥಿತಿಯಲ್ಲಿ ? ಈ ಸಂಸ್ಥೆಗಳು ಅವುಗಳ ಸುಸ್ಥಿತಿ ! ಕಾಪಾಡುವ ರೀತಿ ಕಂಡರೆ ಜಾರ್ಜ್ ಹೇಳಿದ್ದೇ ಸೈ ಅನಿಸುತ್ತದೆ. ಮುಂಬರುವ ಜನಾಂಗದವರು ಅವನ್ನು ಉತ್ತಮ ಸ್ಥಿತಿಯಲ್ಲಿ ಕಾಣುವ ಸಂಭವ ಕಡಿಮೆ; ನಮ್ಮ ಪ್ರಾಚೀನ ದೇವಾಲಯಗಳಿಗೆ ಹೋದಾಗ ಪುರಾತತ್ವ ವಿಭಾಗದವರು ಆ ಸ್ಮಾರಕಗಳನ್ನು ನೋಡಿಕೊಂಡಿರುವ ರೀತಿ, ಅದನ್ನು ಅಲ್ಲಲ್ಲಿ ಒಂದು ಕೆಟ್ಟ ರೀತಿಯಲ್ಲಿ renovation ಮಾಡಿರುವುದು ಕಂಡರೆ ಅತೀವ ವೇದನೆಯಾಗುತ್ತದೆ. ಹಾಗಂತ ಇಡೀ ದೇವಾಲಯಗಳನ್ನು ಹೊರಕ್ಕೆ ಕಳುಹಿಸಲಾದೀತೆ. ನಮ್ಮ ತಜ್ಞರ ಮಟ್ಟವನ್ನು ಎಂತಾದರೂ ಹೆಚ್ಚಿಸಬೇಕು. (ನಮ್ಮಲ್ಲಿನ ಸ್ಮಾರಕಗಳನ್ನು renovation ಮಾಡಿದ್ದು ಸಾಲದಂತ ಪ್ರಾಚ್ಯವಸ್ತು ಇಲಾಖೆಯವರು Angkor wat 'ಅಂಕೋರ್ ವಾಟ್'ನ್ನು ದುರಸ್ಥಿ ಮಾಡುವ ಕೆಲಸಕ್ಕೆ ಕೈ ಹಚ್ಚಿದ್ದಾರೆ. ಸ್ವಲ್ಪ ಕೆಲಸ ಮಾಡಿ, ನೂರಾರು ವರ್ಷಗಳಿಂದ ಹಾಳಾಗದ ಸ್ಮಾರಕಗಳನ್ನು ಇವರು ಕೆಲವೇ ತಿಂಗಳಲ್ಲಿ ಹಾಳು ಮಾಡುತ್ತಿದ್ದಾರಂತ ಅಂತರಾಷ್ಟ್ರೀಯ ಪ್ರಾಚ್ಯವಸ್ತು ತಜ್ಞರಿಂದ ಛೀಮಾರಿ ಹಾಕಿಸಿಕೊಳ್ಳುತ್ತಿದ್ದಾರೆ. ಭಾರತೀಯ ತಜ್ಞರು ಅಂಕೋರ್ ವಾಟ್‌ನ renovation ನಿಲ್ಲಿಸಬೇಕೆಂದು ವಿಶ್ವದ ತುಂಬ ಕೂಗೆದ್ದಿದೆ. ಅಂತರ ರಾಷ್ಟ್ರೀಯ ತಜ್ಞರ ಪ್ರಕಾರ ನಮ್ಮ ತಜ್ಞರು, ಪಂಡಿತರು ಬಹಳ ಪುರಾತನ (Primitive) ಪದ್ಧತಿಗಳು, ರಾಸಾಯನಿಕಗಳನ್ನು ಬಳಸಿ ಅಂಕೋರ್ ವಾಟ್‌ನ್ನು ಹಾಳುಗೆಡವುತ್ತಿದ್ದಾರಂತೆ.)

ಇನ್ನು ನಮ್ಮ ಮ್ಯೂಸಿಯಮ್‌ಗಳಲ್ಲಿ ಸಂಗ್ರಹದ, ಪ್ರದರ್ಶನದ ರೀತಿ ತುಂಬ ಅಸಡ್ಡೆಯಿಂದ ಕೂಡಿದ್ದು, ಅಲ್ಲಿನ ತೇವ, ಗಲೀಜು, ಕಟ್ಟು ಹಾಕಿಸಿರುವ ರೀತಿ ಕಂಡರೆ, (ದೆಲ್ಲಿ ಮುಂತಾದ ಪ್ರಮುಖ ನಗರಗಳ ಮ್ಯೂಸಿಯಮ್‌ಗಳು ಇದಕ್ಕೆ ಸ್ವಲ್ಪಮಟ್ಟಿನ ಅಪವಾದ) ಇದು ನಮ್ಮಲ್ಲಿರುವುದು ಬೇಡ ಎನ್ನಿಸಿಬಿಡುತ್ತದೆ. ಇದು ಉತ್ತಮ ಸಂಗ್ರಾಹಕರ ಬಳಿಯಲ್ಲಿದ್ದರೆ ಮುಂದಿನ ಜನಾಂಗದವರಿಗೆ ನೋಡಲು ಸಿಕ್ಕೀತು, ಇತಿಹಾಸದ ಪಾಲಿಗೂ ಉಳಿದೀತು.

ಇದಕ್ಕೆ ಸಂಬಂಧಿಸಿದಂತೆ ಈ ಜಪಾನೀ ಉದಾಹರಣೆಯನ್ನು ಕೊಟ್ಟ ಜಾರ್ಜ್, ಎರಡನೇ ಯುದ್ಧದ ಸಮಯದಲ್ಲಿ ಮತ್ತು ಯುದ್ಧನಂತರ ಎಲ್ಲವನ್ನೂ ಕಳೆದುಕೊಂಡ ಜಪಾನೀಯರ ಅಮೂಲ್ಯ ಕಲಾಕೃತಿಗಳು ಪರದೇಶೀಯರ ಕೈ ಸೇರಿ ಹೋದುವು.

ಕೆಲವರು ಹಣ ಸಂಪಾದನೆಗಾಗಿ ತಮ್ಮ ಸಂಗ್ರಹವನ್ನು ಮಾರಿದರು. ಆದರೆ ಕೇವಲ 30, 40 ವರ್ಷಗಳ ನಂತರ ಜಪಾನೀಯರು ತಮ್ಮದೆನಿಸಿಸುವ ಎಲ್ಲವನ್ನೂ ಕಲಾಕೃತಿ ಗಳಿಂದ ಹಿಡಿದು ಶೂಲೇಸಿನವರೆಗೆ ಮರಳಿಕೊಳ್ಳುತ್ತಿದ್ದಾರೆ. ವಿಶ್ವದ ರಾಜಕೀಯ ಆರ್ಥಿಕ, ಸಾಂಸ್ಕೃತಿಕ ಸ್ಥಿತಿಗತಿಗಳು ಒಂದೆಡೆ ನಿಲ್ಲುವುದಿಲ್ಲ! ಹಾಗೆಯೇ ನಾವೂ ನಮ್ಮ ಕಲಾಕೃತಿಗಳನ್ನು ಬೇರೆಡೆಗಳಿಂದ ಕೊಳ್ಳುವ ದಿನ ಬಂದೀತು ಅಂಥ ರುಚಿ ಬೆಳೆದು, ಕೈನಲ್ಲಿ ಹಣವೂ ಕೂಡಿ ಬಂದಾಗ (ಜಾರ್ಜ್‌ನ ಈ ವಾದದಲ್ಲಿ ಅವನ ಪುರಾತನ ವಸ್ತು ಮಾರಾಟಗಾರ-ಹಿತಾಸಕ್ತಿ ಎಷ್ಟು ಎಂಬುದನ್ನು ತೂಗಿಯೇ ನಾವು ಇದನ್ನು ಸ್ವೀಕರಿಸ ಬೇಕು.)

ನಾವು ಗ್ಯಾಲರಿಯಲ್ಲಿ ನಿಂತಿದ್ದರಿಂದಲೋ ಏನೋ ಮಾತು ಗ್ಯಾಲರಿ ವ್ಯವಸ್ಥೆ, ಕಲಾಮಾರುಕಟ್ಟೆ ಅದರ ಸಾಧಕ ಬಾಧಕಗಳೆಡೆಗೆ ಹರಿಯಿತು. ಇಂದಿನಂತೆ ಕಲಾಕೃತಿ ಗಳನ್ನು ಒಂದು ವಸ್ತು (object) ವನ್ನಾಗಿ ಪರಿಗಣಿಸಿ ಅದನ್ನು ಮುಕ್ತ ಮಾರುಕಟ್ಟೆ ಯಲ್ಲಿ ಕೊಳ್ಳುವ, ಮಾರುವ ರೀತಿ ಒಂದು ನೂರು ವರ್ಷಕ್ಕಿಂತ ಸ್ವಲ್ಪ ಹಳೆಯದು. ಹಿಂದೆಲ್ಲ ಹಣವಿದ್ದ ರಾಜರು, ಆಸ್ಥಾನಿಕರು, ಶ್ರೀಮಂತ ವ್ಯಾಪಾಸ್ಥರು ಕಲಾವಿದನಿಗೆ ಹೇಳಿ ಬರೆಯಿಸಿದಂತಹ ಕಲಾಕೃತಿಗಳೇ ಬಹಳ (commissioned works) ಚಿತ್ರ ರಚನೆಯಾಗುತ್ತಿರುವಾಗಲೂ, ಮುಗಿದ ಮೇಲೂ ಕಲಾವಿದ ಅವರ ಆಶ್ರಯದಲ್ಲಿ ಬಾಳುತ್ತಿದ್ದ. ಹೀಗೆ ಕೊಳ್ಳುವಿಕೆಯ ಆಶಯ ವ್ಯಕ್ತವಾದ ನಂತರ ಚಿತ್ರದ ಸೃಷ್ಟಿ ಯಾಗುತ್ತಿತು. ಇಂದು ಕೊಳ್ಳುವ ಕ್ರಿಯೆಯ ನಿರೀಕ್ಷೆಯಲ್ಲಿ ಕೃತಿಯ ಸೃಷ್ಟಿ. ಇವತ್ತಿಗೂ ಸಹ ದೊಡ್ಡ ದೊಡ್ಡ ಕಟ್ಟಡಗಳಿಗೆ, ಸ್ಮಾರಕಗಳಿಗೆ ಕಲಾವಿದರಿಗೆ ಹೇಳಿ ಬರೆಯಿಸಿದಂತಹ ಕೃತಿಗಳು ಉಂಟು. ಆದರೆ ಬಹುಪಾಲು ಕೃತಿಗಳು ಕಲಾವಿದ ತನ್ನಿಚ್ಛೆಯಂತೆ ಬರೆ ದಿಟ್ಟವು. ಅದರ ಮಾರಾಟ ಅವನ ತಲೆನೋವಲ್ಲ.

ತಯಾರಾದ ಕೃತಿಯನ್ನು ಮಾರಾಟ ಮಾಡಲೆಂದೇ ಕಲಾವಿದನಿಗೂ ಸಂಗ್ರಹ ಕಾರನಿಗೂ ಮಧ್ಯವರ್ತಿಯಾಗಿ ಗ್ಯಾಲರಿಗಳು ಹುಟ್ಟಿಕೊಂಡವು. ಕಲಾವಿದನಿಗೆ ತನ್ನ ಕೆಲಸದಲ್ಲಿ ಮಗ್ನನಾಗುವಂತೆ ಬಿಟ್ಟು ಮಾರಾಟದ ಹೊಣೆಯನ್ನು ಖಾಸಗಿ ಗ್ಯಾಲರಿಗಳು ವಹಿಸಿಕೊಂಡವು. ಮಧ್ಯವರ್ತಿಯಾಗುವ ಗ್ಯಾಲರಿ ಅಲ್ಲಿಗೇ ನಿಲ್ಲದೆ ಕೆಲವೊಮ್ಮೆ ಕಲಾ ವಿದನಿಂದ ಮುಂಚಿತವಾಗಿ ಕೃತಿಯನ್ನು ಕೊಂಡು ಸಂಗ್ರಹಕಾರರು ದೊರೆಯುವವರೆಗೆ ತಮ್ಮಲ್ಲಿ ಇಟ್ಟುಕೊಳ್ಳುತ್ತವೆ, ಅಥವಾ consignment ರೂಪದಲ್ಲೂ ಇಟ್ಟು ಕೊಳ್ಳುವುದುಂಟು. ಇದರಿಂದ ಸಂಗ್ರಹಕಾರನಿಗೆ ಸಹ ಪ್ರತಿಯೊಬ್ಬ ಕಲಾವಿದನ ಬಳಿಯೂ ಹೋಗುವುದು ತಪ್ಪಿ ಒಂದೇ ಜಾಗದಲ್ಲಿ ಅನೇಕ ಕಲಾವಿದರ ಕೃತಿಗಳು ನೋಡಸಿಗುತ್ತವೆ. ಪ್ರದರ್ಶನದ ಸಮಯದಲ್ಲಿ ಕಲಾಕೃತಿ ಹಾಗೂ ಕಲಾವಿದರ ಕುರಿತ ಮಾಹಿತಿ ನೀಡುವ ಪುಸ್ತಿಕೆಗಳನ್ನು ಗ್ಯಾಲರಿ ಪ್ರಕಟಿಸುತ್ತದೆ. ವಿದೇಶದ ಕೆಲವು ಗ್ಯಾಲರಿ ಗಳು ಕೇವಲ ಕೆಲವೇ ಕಲಾವಿದರ ಅಥವಾ ಯಾವುದೋ ಒಂದು ಅವಧಿಯ ಕಲಾಕೃತಿ

ಗಳ ಸಂಗ್ರಹದಲ್ಲಿ ವಿಶೇಷ ಪರಿಣತಿಹೊಂದಿರುತ್ತವೆ. ಬಹುಶಃ ನಾವಷ್ಟು ಜನ ಒಂದೆಡೆ ಸೇರಿ ಚರ್ಚೆಯಲ್ಲೋ, ಸ್ಲೈಡ್ ಷೋನಲ್ಲೋ ಭಾಗವಹಿಸಲು ಸಾಧ್ಯವಾಗಿರುವುದು ಈ ಗ್ಯಾಲರಿಗಳಿಂದ (ಇಂಥದೊಂದು ಸ್ಥಳ, ಅವಕಾಶವನ್ನು ಪರಿಣಾಮಕಾರಿಯಾಗಿ ರೂಪಿಸುವಲ್ಲಿ ಅಕಾಡೆಮಿ ಬಹುಮಟ್ಟಿಗೆ ಸೋತು, ಕೇವಲ ಒಂದು ನಾಮಮಾತ್ರದ ಸಂಸ್ಥೆಯಾಗಿದೆ ಎಂಬುದನ್ನು ಇಲ್ಲಿ ಗಮನಿಸಬೇಕು. ಮತ್ತು ಅಕಾಡೆಮಿ ಸೋಷಲಿಸ್ಟ್ ವ್ಯವಸ್ಥೆಯ ಕೂಸು, ಇಂದಿನ ಬಂಡವಾಳಷಾಹಿ ಹೆದ್ದಾರಿಯಲ್ಲಿ ಮೂಲೆ ಗುಂಪಾಗುವ, ತನ್ನ relevence ಕಳೆದುಕೊಳ್ಳುವ ಸಂಭವವೇ ಹೆಚ್ಚು)

ಕೆಪಿಟಲಿಸ್ಟ್ ವ್ಯವಸ್ಥೆಯ ಕೂಸಾದ ಗ್ಯಾಲರಿಗಳು, ಕಲಾಕ್ಷೇತ್ರಕ್ಕೆ ಅಪಾರ ಹಣ ವನ್ನು ತಂದುಕೊಟ್ಟು, ಕಲಾಕೃತಿಯ ಗುಣಮಟ್ಟ, ಅವನ್ನು ಕಂಡು ಖುಷಿಪಡುವ ಸಹೃದಯ ಎಲ್ಲವನ್ನೂ ಕಡೆಗಣಿಸಿ ಹಣವನ್ನು ಮುಖ್ಯವಾಗಿಸಿಬಿಡುವ ಅತಿರೇಕವೂ ಉಂಟು. ಕಲಾಕೃತಿಗಳಕೊಳ್ಳುವಿಕೆಯೂ ಒಂದು ಬಗೆಯ ಬಂಡವಾಳ ಹೂಡಿಕೆಯಾಗಿ ಪ್ರತಿಯೊಂದು ಕೃತಿಯ ವಾಣಿಜ್ಯ ಬೆಲೆ ಬಹು ಮುಖ್ಯವೆನಿಸಿಬಿಟ್ಟಿದೆ. ಮನೆಯಲ್ಲಿ ಒಂದು ಹುಸೇನ್ ಕೃತಿಯಿರುವುದು ಮನೆಯ ಯಜಮಾನನ ಪ್ರತಿಷ್ಠೆಯನ್ನು ಹೆಚ್ಚಿಸು ವುದೆಂದು ಜನ ನಂಬುತ್ತಾರೆ. ಹೀಗೆ ಕಲಾಕೃತಿಯೊಂದಿಗೆ ಅದರ ಗುಣಮಟ್ಟವನ್ನೂ ಮೀರಿ ಅನೇಕ ಗುಣ ಅವಗುಣಗಳು ಥಳುಕು ಹಾಕಿಕೊಳ್ಳುತ್ತಾ ನಡೆದಿದೆ. ನಮ್ಮ ದೇಶದಲ್ಲಿ ವಿದೇಶಗಳಲ್ಲಿಯಂಥ ಕಟ್ಟಾ ವ್ಯಾಪಾರೀ ಮನೋಭಾವ ಕಲಾಕೃತಿಯೊಂದರ ಮಾರಾಟದಲ್ಲಿಲ್ಲ, ಆದರೆ ಎಲ್ಲಕಡೆ ಇಂಥದೇ ದೃಶ್ಯ ಕಂಡುಬರುವುದಿಲ್ಲ, ರೇಡಿಯೋ,ಟಿ.ವಿ. ಗಳನ್ನು ಮೀರಿದಷ್ಟೇ ಜೋರಿನಿಂದ ವ್ಯವಸ್ಥಿತ ಜಾಹಿರಾತು, ಜನಸಂಪರ್ಕ (Public Relations) ಇಂಥ ಮಾರ್ಗಗಳನ್ನು ತೀವ್ರವಾಗಿ ಒಳಗೊಂಡಿಲ್ಲ ಆದರೆ ಭಾರತದ ಪ್ರಮುಖ ನಗರಗಳಲ್ಲಿ ಹತ್ತಾರು ಗ್ಯಾಲರಿಗಳು ಹುಟ್ಟಿಕೊಂಡು ಭಾರತೀಯ ಕಲಾವಿದನ ಸ್ಥಿತಿ ಹಿಂದೆಂದಿಗಿಂತ ಉತ್ತಮಗೊಂಡಿದೆ. ಪುಸ್ತಕಗಳಲ್ಲಿ, ಸಿನಿಮಾಗಳಲ್ಲಿ ಕಾಣಬರುವ ಜೋಳಿಗೆಯ ಜೋಭದ್ರ, ದೀನ ಕಲಾವಿದನ ಸ್ಥಿತಿ ಬದಲಾಗುತ್ತಾ ಚಿತ್ರಕಾರರೂ ಸಹ ಎಲ್ಲ ಆಧುನಿಕ ಸೌಲಭ್ಯಗಳನ್ನು ಹೊಂದಿ ಜೀವನ ನಡೆಸುವಷ್ಟು ಅವನ ಆರ್ಥಿಕ ಸ್ಥಿತಿ ಸುಧಾರಿಸಿದೆ. ಇಂದು ಚಿತ್ರಕಾರರನೇಕರು ಕಾರಿನಲ್ಲಿ ಬಂದಿಳಿಯುತ್ತಾರೆ ಎಂಬುದರ ಹಿಂದೆ ಈ ಗ್ಯಾಲರಿಗಳ ಪಾತ್ರ ಪ್ರಮುಖ ಎಂಬುದನ್ನು ಮರೆಯುವಂತಿಲ್ಲ.

ಸಂದರ್ಶನ

# ಕೆ. ವಿ. ಸುಬ್ಬಣ್ಣ ಜೊತೆ ಮಾತುಕತೆ

ಸಂದರ್ಶನ : **ನ. ರವಿಕುಮಾರ್** ಸಹಾಯ : **ಭಾರತಿತೋರಗಲ್, ಶರಣಪ್ಪ**

ಸುಬ್ಬಣ್ಣನವರನ್ನ ಕುರಿತು ಈ ಸಂದರ್ಭದಲ್ಲಿ ಹೇಳುವಾಗ ಹೆಚ್ಚಾದರೆ ಕ್ಲೀಷೆ ಎನಿಸುತ್ತೆ, ಏನೂ ಹೇಳದಿದ್ದರೆ ಹೇಳಲಾಗದ್ದರ ಕೊರಗು–ಮೌನ ಉಳಿಯುತ್ತೆ, ಪ್ರಶಸ್ತಿ ಕೀರ್ತಿಗಳು ಬಂದಿತೆಂದು ಸುಬ್ಬಣ್ಣನವರ ಕೆಲಸಗಳಲ್ಲಿ ಅವುಗಳ ಸರಳತೆಯಲ್ಲಿ ಅವರ ಸಜ್ಜನಿಕೆಯಲ್ಲಿ ಕಿಂಚಿತ್ತೂ ಬದಲಾವಣೆ ಕಾಣಿಸುವುದಿಲ್ಲ, ಇಂಥಾ ಕೆಲವರನ್ನ ನೋಡಿದಾಗಲೆಲ್ಲಾ ಒಂಥರಾ ಗೌರವ ಹುಟ್ಟುತ್ತೆ ಅವರು ತೋರಿಸುವ ಆತ್ಮೀಯ ಪ್ರೀತಿಗೋ ಅಥವಾ ಯಾವುದೇತರದ ಆಡಂಬರ ಅಬ್ಬರವಿಲ್ಲದ ವ್ಯಕ್ತಿತ್ವಕ್ಕೋ ಏನೊ.

ಸುಬ್ಬಣ್ಣ ನಮ್ಮ ಸಾಂಸ್ಕೃತಿಕ ಬದುಕಿನ ಮುಖ್ಯವ್ಯಕ್ತಿ ಎನ್ನಬಹುದು, ಅವರ ನೀನಾಸಂ ರಂಗಶಿಕ್ಷಣ ಕೇಂದ್ರದ ಸಾಧನೆ, ಅಕ್ಷರ ಪ್ರಕಾಶನದ ಅನೇಕ ಮುಖ್ಯ ಪುಸ್ತಕಗಳು, ತಿರುಗಾಟದ ನಾಟಕ ಪ್ರಯೋಗಗಳು ಇವೆಲ್ಲವೂ ಅವರ ಉತ್ತಮ ಕಲಾಕೃತಿಗಳಿದ್ದಂತೆ, ಈ ದೇಶದ ಮೂಲ ಬಿಂದುವಾಗಿರುವ ಹೆಗ್ಗೋಡಿನಂಥಾ ಪುಟ್ಟ ಹಳ್ಳಿಯಲ್ಲಿನ ಜನಗಳಲ್ಲಿ ಸದಭಿರುಚಿಯ ಕೃಷಿ ಅವರ ಹೆಗ್ಗಳಿಕೆ. ಅದರಲ್ಲೂ ಕವಿಗೋಷ್ಠಿಗೆ ಟಿಕೇಟು ಖರೀದಿಸಿ ಬರುವ ಅಲ್ಲಿನ ಜನಗಳ ಅಭಿರುಚಿ ಗಮನಾರ್ಹ, ಮಾಗ್ಸೆಸೆ ಪ್ರಶಸ್ತಿಯ ಮೂಲಕ ಇಡೀ ಪ್ರಪಂಚದ ಕಣ್ಣು ಹೆಗ್ಗೋಡಿನಂಥಾ ಹಳ್ಳಿಯ ಕಡೆ ಹರಿದಿದೆಯಾದರೂ, ತನ್ನ ತಾಲ್ಲೂಕಿನ ಮಾರುಕಟ್ಟೆಯಲ್ಲಿ ತಮ್ಮ ಅಡಿಕೆಬೆಳೆಯ ಧಾರಣೆ ಕುಗ್ಗದ ಕಡೆಗೂ ಗಮನ ಹರಿಸಿ, ತಮ್ಮ ಯಾವುದೇ ಕಾರ್ಯಕ್ರಮದ ಗುಣಮಟ್ಟದಲ್ಲಿ ರಾಜಿಯಾಗದೆ, ಅಚ್ಚುಕಟ್ಟಾಗಿ ಆಡಂಬರವಿಲ್ಲದೆ ನಡೆಸಿಕೊಂಡು ಬಂದಿರುವ ಸುಬ್ಬಣ್ಣನವರನ್ನ ಇತ್ತೀಚೆಗೆ ಹೆಗ್ಗೋಡಿನಲ್ಲಿ ನಡೆದ ಸಂಸ್ಕೃತಿ ಶಿಬಿರದಲ್ಲಿ ಭಾಗವಹಿಸುವಾಗ ನನ್ನ ಸ್ನೇಹಿತರ ಜೊತೆಗೂಡಿ ನಡೆಸಿದ ಮಾತುಕತೆಯ ಕೆಲವು ತುಣುಕುಗಳು ಇವು.

* ಭಾರತದ ಪ್ರಜಾಪ್ರಭುತ್ವ ವಿಫಲ ಅನ್ನಿಸುತ್ತದೆಯೆ ? ಹಾಗೇ ರಷ್ಯಾದಲ್ಲಿ ನಡೆದದ್ದು ಕಮ್ಯೂನಿಸಂನ ಪತನ ಅನ್ನಬಹುದೇ ?

೦ ಇದನ್ನು ಎರಡು ದೃಷ್ಟಿಯಿಂದ ನೋಡಬೇಕು ಒಂದನೆಯದು ಭಾರತದಂತಹ ದೇಶದಲ್ಲಿನ ಪ್ರಜಾಪ್ರಭುತ್ವದ ಯಶಸ್ಸನ್ನು ಎಂದೂ ಇತಿಹಾಸದಲ್ಲಿ ನೋಡಲಿಕ್ಕಾಗೊಲ್ಲ. ಈರೀತಿ 40 ವರ್ಷ ಪ್ರಜಾಪ್ರಭುತ್ವ ನಡೆದುಕೊಂಡು ಬಂದ ದೇಶ ಇಲ್ಲ. ಇಂಗ್ಲೆಂಡ್ ಅಮೇರಿಕಾದಂತಹ ದೇಶಗಳಲ್ಲಿ ಇರುವುದು ನಿಜವಾದ ಡೆಮಾಕ್ರಸಿ ಅಲ್ಲ. ಅಲ್ಲಿಯ ಸರ್ಕಾರವನ್ನು ಆಳುವವರು ದೊಡ್ಡದೊಡ್ಡ ಕೈಗಾರಿಕೋದ್ಯಮಿಗಳು. ಅವರು ಪ್ರತಿಯೊಬ್ಬರನ್ನೂ ಡಿಕ್ಟೇಟ್ ಮಾಡ್ತಾರೆ. ತಮಗೆ ಬೇಕಾದ ರುಚಿಯನ್ನು ಜನಕ್ಕೆ ತಿನ್ನಿಸಬೇಕೆನಿಸಿದ್ರೆ ಮಾರುಕಟ್ಟೆಯಿಂದ ದೂರದರ್ಶನದವರಗೆ Colourfull ಜಾಹಿರಾತು ಮಾಡಿ ಒಬ್ಬ ಕೈಗಾರಿಕೋದ್ಯಮಿ ಒಂದು ತಿಂಗಳಿನಲ್ಲಿ ಮಾಡಿಬಿಡುತ್ತಾನೆ.

ಮನುಷ್ಯನಿಗಿರೋದು ಒಂದು ಸ್ವಾತಂತ್ರ ಇನ್ನೊಂದು ಸಮಾನತೆ. ಮನುಷ್ಯ ಸ್ವತಂತ್ರ ಆದಷ್ಟೂ ರಾಕ್ಷಸನಾಗುತ್ತಾನೆ. ಅದನ್ನು ನಿಯಂತ್ರಿಸುವುದಕ್ಕೆ ಸಮಾನತೆ ಅನ್ನುವ Concept ಇಟ್ಟುಕೊಳ್ಳಬೇಕು. ಎರಡನೆಯದು ನಮ್ಮಲ್ಲಿ ಡೆಮಾಕ್ರಸಿ ಆಗುವ ಹೊತ್ತಿಗೆ ಆಗಲೇ ನಾವು 100 ವರ್ಷ ಯೋಚನೆ ಮಾಡಿದ್ವಿ, ಗಾಂಧಿ, ಅಂಬೇಡ್ಕರ್, ತಿಲಕರಂತೆ ನೂರಾರು ಮಂದಿ ಚಿಂತಕರು ಬಂದಿದ್ದರು ಈರೀತಿ ಏಕಕಾಲದಲ್ಲಿ ಇಷ್ಟು ಮಂದಿ ಬಂದದ್ದನ್ನು ಕೂಡ ಇತಿಹಾಸದಲ್ಲಿ ನೋಡಲಿಕ್ಕೆ ಸಿಗೋದಿಲ್ಲ. ಜೊತೆಗೆ 1947 ಆಗಸ್ಟ್ 14 ರಂದು ಭಾರತವನ್ನಾಳುತ್ತಿದ್ದ ಸುಮಾರು 700 ಮಂದಿ ರಾಜರು ಮಾರನೇ ದಿನ ಸ್ವತಂತ್ರ ಬಂದಾಗ ಒಬ್ಬಿಬ್ಬರನ್ನು ಬಿಟ್ಟು ಅಷ್ಟೂ ಜನ ಯಾವುದೇ ರಕ್ತಪಾತವಿಲ್ಲದೆ ಒಬ್ಬ ಮನುಷ್ಯ ಕೈ ಎತ್ತದೆ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡರು. ಇಂಥದ್ದೊಂದು ದೊಡ್ಡ ರೆವಲ್ಯೂಷನ್ ಎಲ್ಲೂ ನಡೆದಿಲ್ಲ.

ಡೆಮಾಕ್ರಿಸಿಯ ಮುಖ್ಯ Concept ಇರೋದೆ ಅತ್ಯಂತ ಸಾಮಾನ್ಯ ಮನುಷ್ಯನೂ ಅತ್ಯಂತ ಗೌರವದ ಸ್ಥಾನಕ್ಕೆ ಹೋಗಬೇಕೆನ್ನುವುದು. ಈ 50 ವರ್ಷಗಳಲ್ಲಿ ನಮ್ಮ ಜಿಲ್ಲೆಯಿಂದ ಒಬ್ಬ ಮುಖ್ಯಮಂತ್ರಿ ಆಗೋಕಾಯ್ತು ಈ ಸಾಧನೆ ಅದ್ಭುತವಾದದ್ದು. ಯಾವ ಡೆಮಾಕ್ರಸಿಯಲ್ಲಿಯೂ ಮೀಸಲಾತಿ, ಭೂ ಸುಧಾರಣೆಯಂತಹ ವಿಷಯಗಳ ಬಗ್ಗೆ ಯೋಚ್ನೆಮಾಡಿಲ್ಲ. ಈಗಿನ ಪಾರ್ಲಿಮೆಂಟಿಗೆ ಎಲ್ಲಾಜಾತಿಯ ಜನ ಹೋಗೋಕೆ ಸಾಧ್ಯವಾದದ್ದು ಕೂಡ ಮರೆಯಬಾರದು. Quality suffer ಆಗಿದೆ, ದೋಷಗಳಿವೆ ಒಪ್ಪುತ್ತೀನಿ. ಯಾವ ಯಾವ ಜಾತಿಗಳು ಸಹಸ್ರಾರು ವರ್ಷಗಳಿಂದ ದಲಿತವಾಗಿತ್ತೋ ಅಂತಹವರನ್ನು ಮೇಲಕ್ಕೆ ತಂದಾಗ ಈ ಸಮಾಜದಲ್ಲಿ ಒಂದು ಮಂಥನಕ್ರಿಯೆ ನಡೆಯುತ್ತಿರತ್ತೆ ಆಗ ಅನೇಕ ಕಲ್ಮಷಗಳು, ಮೇಲಕ್ಕೆ ಬರುತ್ತವೆ. ಅದನ್ನು ತಾಳಿಕೊಳ್ಳುವ ತಾಳ್ಮೆಬೇಕು. ಒಂದು ಕಡೆಯಿಂದ Exellence ಮತ್ತು Quality ಬೇಕು, ಮತ್ತೊಂದು ಕಡೆ ಸುಧಾರಣೆ ಆಗಬೇಕೆಂದರೆ ಹೇಗೆ ? ಮೊದಲು Exellence ಕಡೆ ಗಮನಕೊಟ್ಟಿದ್ದೇವೆ ಜೊತೆಗೆ Quality ಮತ್ತು ಸುಧಾರಣೆ ಕಡೆಗೂ ಗಮನ ಕೊಟ್ಟರೆ ಅತ್ಯುನ್ನತ ಸಾಧನೆ ಮಾಡಬಹುದು.

* ಈ ಹೊತ್ತು ನಮ್ಮಲ್ಲಿ ಭಾರತೀಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ನಡುವೆ ಘರ್ಷಣೆ ಇದೆ ಅನ್ನಿಸೊಲ್ವೆ ?

೦ ಇದು ಭಾರತೀಯ ಹ್ಯಾಗು ಪಾಶ್ಚಿಮಾತ್ಯ ಅಂತ ಹೇಳಲಿಕ್ಕೆ ಬರೋದಿಲ್ಲ ಪಾಶ್ಚಿಮಾತ್ಯರಲ್ಲೂ ನಮ್ಮಂತೆ ಇರಲಿಲ್ಲವೋ ಏನೊ ? Renascence ನಿಂದ ಶುರುವಾಗಿ ವಿಜ್ಞಾನಯುಗ ಅಂತಾರಲ್ಲ Post Renascence ಮನೋಭಾವ ಬದಲಾಯಿತು. ಮನುಷ್ಯ ಜಗತ್ತು ಒಂದೇ ಅಂತ ತಿಳಿದುಕೊಂಡಿದ್ದ. ಡೆಕಾರ್ಟ್, ನ್ಯೂಟನ್ ನಂತಹವರು ಬಂದು ಮೈಕ್ರೋಸ್ಕೋಪ್, ಟೆಲಿಸ್ಕೋಪ್‌ಗಳ ಮುಖಾಂತರ ಮನುಷ್ಯ ಗಡಿಯಾರ ಇದ್ದಂತೆ Mechanastic ಯಂತ್ರ ಅಂತ ತೋರಿಸೋದಕ್ಕೆ ಶುರು ಮಾಡಿದ್ದರಿಂದ ಬೇರೆ ರೀತಿಯ ಯೋಚನೆ ಮಾಡಲು ಶುರುಮಾಡಿದರು. ಆಗ ಅಲ್ಲಿನ ಜನಕ್ಕೂ ಇನ್ನುಳಿದ ಜನಕ್ಕೂ Attitude ಬೇರೆ ಆಗಿ ಸಂಘರ್ಷ ಶುರುವಾಯ್ತು ಇದೇ ರೀತಿಯ Attitude ನ್ನು ಚೈನಾ, ಲ್ಯಾಟಿನ್ ಅಮೇರಿಕಾ, ಆಫ್ರಿಕಾದಂತಹ ದೇಶಗಳಲ್ಲೂ ಕಾಣಬಹುದು.

ಪಾಶ್ಚಿಮಾತ್ಯ ಮತ್ತು ವೈಜ್ಞಾನಿಕ ನಾಗರಿಕತೆಗೂ ಅದರ ಹಿಂದಿನ ಸಂಸ್ಕೃತಿಗೂ ವ್ಯತ್ಯಾಸಗಳನ್ನು ಸ್ಥೂಲವಾಗಿ ಹೇಳೊದಾದ್ರೆ ಮನುಷ್ಯ ಪ್ರಕೃತಿಯನ್ನು ಗೆದ್ದು ಬೇಕಾದ್ದನ್ನು ಸಾಧಿಸಬಹುದು, ಅಭಿವೃದ್ಧಿ ಅನ್ನುವ Concept ಅಂದ್ರೆ ಬೆಳೀತಾ ಬೆಳೀತಾ ಹೋಗೋದು. ಈ ಊರಿನಲ್ಲಿ ಇವೊತ್ತು ಒಂದು ಕಾರಿದ್ರೆ ಮುಂದೆ ಮನೆಗೊಂದು, ಜನಕ್ಕೊಂದು ಆಗತ್ತೆ ಹೀಗೆ ಬೆಳಿತಾ ಬೆಳಿತಾ ಹೋದ್ರೆ ಎಲ್ಲಿಗೊಗೆತ್ತೆ ಅಂತ ಯೋಚ್ನೆ ಮಾಡ್ಲಿಲ್ಲ ಯುೂರೋಪಿನ ಈ ನಾಗರೀಕತೆ ಶುರುವಾದಾಗ ಸಂಪನ್ಮೂಲಗಳು ನಿಯಮಿತ ಅಂತ ಗೊತ್ತಿರಲಿಲ್ಲ. ಅದಕ್ಕಿಂತ ನಮ್ಮ ಸಂಸ್ಕೃತಿಗೆ ಹೋದ್ರೆ ಬುದ್ಧ ಅದನ್ನೆ ಹೇಳ್ತಾನೆ. ಮನುಷ್ಯನ ಆಸೆಗೆ ಮಿತಿಇಲ್ಲ ಆಸೆಯನ್ನ ಪೂರೈಸಿದಷ್ಟೂ ಹೆಚ್ಚಾಗತ್ತೆ ಅದಕ್ಕೆ ಕೊನೆಯೇ ಇಲ್ಲ ಆದರೆ ಸಂಪನ್ಮೂಲಗಳಿಗೆ ಕೊನೆಯಿದೆ ಆದ್ರಿಂದ ಮನುಷ್ಯ ಬದುಕಬೇಕೆಂದ್ರೆ ಆಸೆಯನ್ನ Limit ಮಾಡಿಕೊಳ್ಳಬೇಕು.ಗಾಂಧಿ ,ಬಸವ, ಅಂಬೇಡ್ಕರ್‌ನಂತವರು ಕೂಡ ಇದನ್ನೆ ಹೇಳ್ತಾರೆ. ಆ ನಾಯಕರೆಲ್ಲಾ ಹೊರಗಿನಿಂದ ಬಂದವರಲ್ಲ ನಮ್ಮ ಜನರ ಮನಸ್ಸಿನ Consolidated ರೂಪದ ಹಾಗೆ ಇದ್ದವರು ಇವರ civilization structure, communitiy wisdom ಹೇಳುವುದೊಂದೆ ಆಸೆಯನ್ನು ಕಡಿಮೆಕೊ, ಎಂದು. ಬಹುಶಃ ಇದೊಂದೇ ದಾರಿಯೇನೋ ನಮ್ಮ ಈ ಸಂಸ್ಕೃತಿ ಕಡೆಗೆ ಹೆಚ್ಚು ಗಮನಕೊಡಬೇಕು ಅನ್ನಿಸುತ್ತೆ.

* ಈಗ ನಮಗೆ ಧರ್ಮಗಳ ಸಂಘಟನೆಯ ಅವಶ್ಯಕತೆ ಇದೆಯೆ ? ಹಾಗೆಯೇ ಧರ್ಮವನ್ನು ಕೇಂದ್ರವಾಗಿಟ್ಟುಕೊಂಡು ನಮ್ಮ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದೇ ?

೦ ಯೋಚ್ನೆ ಮಾಡ್ಬೇಕು, ಆದ್ರೆ ಅದನ್ನು ಬಹಳ ಎಚ್ಚರಿಕೆಯಿಂದ ಉಪಯೋಗಿಸಬೇಕು. ಧರ್ಮ ಅಂದ ಕೂಡಲೇ ನಮ್ಮನ್ನು 'ಸನಾತನಿ' ಮಾಡಿಬಿಡಬಹುದು. ಆದರೆ ಧರ್ಮ ಅನ್ನುವುದು ಮುಟ್ಟಬಾರದ ವಸ್ತು ಅಂದುಕೊಳ್ಳಬಾರದು ಈ ರೀತಿ ಮಾಡಿದ್ದು ರಷ್ಯಾದ ತಪ್ಪು. ಧರ್ಮವನ್ನು ರಾಕ್ಷಸರು ಮಾಡಿದ್ದಿಲ್ಲ ಮನುಷ್ಯನೇ ಮಾಡಿದ್ದು ಅವನಲ್ಲಿ ಒಳಿತೂ ಕೆಡಕೂ ಎರಡೂ ಇದೆ. ಅದನ್ನ ಅರ್ಥ ಮಾಡಿಕೊಳ್ಳೋಕೆ ಮತ್ತು ಈಗ ಅದನ್ನ ಹೇಗೆ ಉಪಯೋಗಿಸಿಕೊಳ್ಳೋಕೆ ಸಾಧ್ಯ ಅನ್ನೋದನ್ನ ನೋಡಬೇಕು. ಕೆಟ್ಟದ್ದನ್ನೆಲ್ಲಾ ಧಿಕ್ಕರಿಸಿ, ಕಿತ್ತುಹಾಕಿ ಉಳಿಸಿಕೊಂಡು ಹೋಗಬೇಕು. ಗಾಂಧಿ ಕೂಡ ಇದನ್ನೇ ಹೇಳೋದು ನಾನು ಕ್ರಿಶ್ಚಿಯನ್ ಆಗಬೇಕಿಲ್ಲ ಹಿಂದೂ ಧರ್ಮದಲ್ಲಿದ್ದುಕೊಂಡೇ ಅದರ ಒಳಿತನ್ನು ಹೆಚ್ಚು ಮಾಡುತ್ತೇನೆಂದು. ಬಹುಶಃ ಈ ಮನೋಭಾವನೆಯಿಂದ ಹೋಗಬೇಕಾಗತ್ತೆ ಕೆಲವು ಸಾರಿ ಧರ್ಮವನ್ನು ವಿರೋಧಿಸುವ ಸಂದರ್ಭ ಕೂಡ ಬರತ್ತೆ. ಮತ, ಮತೀಯ ನಂಬಿಕೆ ಇತ್ಯಾದಿ. ಉದಾಹರಣೆಗೆ ನಮ್ಮೂರಲ್ಲಿ ಹವ್ಯಕ ಮಹಾ ಸಮ್ಮೇಳನ ಆಗತ್ತೆ ನಾನದನ್ನ protest ಮಾಡ್ತೀನಿ. ಈವೊತ್ತಿಗೂ ನನ್ನ ನಂಬಿಕೆ ಅದೇ. ಮೇಲಿನ ವರ್ಗಗಳಿಗೆ ಮುಖ್ಯವಾಗಿ ಅನೇಕ ವರ್ಷಗಳಿಂದ ಸಂಘಟನೆ ಮಾಡಿಕೊಂಡು ಬಂದಿರುವ ಬ್ರಾಹ್ಮಣರಿಗೆ ಅದು ಅವಶ್ಯಕತೆ ಇಲ್ಲ. ಅದೇ ಕೆಳವರ್ಗದವರಿಗೆ ಬಹಳ ಅಗತ್ಯ. ಹರಿಜನರು ಸಂಘಟನೆ ಮಾಡಿದ್ರೆ ಅವರಿಗೆ ಮತೀಯ ಅಂತ ಭಾವಿಸದೆ support ಮಾಡಬೇಕು.

* ನಾಟಕಗಳಲ್ಲಿ ಜಾನಪದೀಯ ಅಂಶಗಳನ್ನ ಬಳಸಿಕೊಳ್ಳುವ ಬಗ್ಗೆ ನಿಮ್ಮ ಅಭಿಪ್ರಾಯ ಏನು ?

೦ ಎಲ್ಲಾ ಅಷ್ಟೇ ಜಾತಿ ಬಳಸಿಕೊಂಡಂತೆ. ನೂರು ವರ್ಷಗಳಿಂದ ಜಾತಿ ಏನನ್ನು ಮಾಡುತ್ತಿತ್ತೂ ಅದನ್ನೇ ಈ ಸಮಾಜ ಮಾಡತ್ತೆಅಂದ್ರೆ ಅದು ಅನ್ಯಾಯ, ಅನ್ಯಾಯವಾಗೋದನ್ನ ಕಿತ್ತಾಕಬೇಕು. ಜಾತಿಯ element ಯಾಕೆ ಬಳಸಿಕೊಳ್ಳಬೇಕು ಅಂದ್ರೆ ಈ ಹೊತ್ತಿನ ಬದುಕು ಹಸನಾಗೋಕೆ. ಇನ್ನೂ ಚೆನ್ನಾಗಿ ಬದುಕಕ್ಕೆ ಸಾಧ್ಯವಾಗತ್ತೊ ಹಾಗೆ ನಮ್ಮ creative ರಂಗಭೂಮಿಗೆ ಬಳಸಿಕೊಳ್ಳಬಹುದು. ನೀವು ಯಕ್ಷಗಾನ ಪೂಜ್ಯ ಅಂದುಕೊಂಡರೆ ಹಿಂದೂಧರ್ಮ ಪೂಜ್ಯ ಅಂದಷ್ಟೇ ಪ್ರಯೋಜನ. ನನಗೆ ಈ ಕ್ಷಣದ ಒದುಕಿಗೆ ಅದು ಪೂಜ್ಯ ಅಷ್ಟೆ. ನನ್ನ ಮನಸ್ಸು ಒಪ್ಪಿದರೆ ಹಳೆಯುದನ್ನ, ಕೊರತೆ ಕಂಡರೆ ಬೇರೆಯದನ್ನ ಉಪಯೋಗಿಸ್ತಿನಿ. ಹೀಗೆ ನಮ್ಮ ಜಾನಪದ ರಂಗಭೂಮಿಯನ್ನು ನೋಡಬೇಕು ಅನ್ನಿಸುತ್ತೆ.

* ಆಧುನಿಕ ನಾಗರೀಕತೆಯ ಪ್ರಭಾವದಿಂದ ಜಾನಪದ ಕಲೆಗಳನ್ನು ಉಳಿಸಬೇಕು ಅನ್ನಿಸೊದಿಲ್ವೆ ?

೦ ಯಾಕೆ ಉಳಿಸಬೇಕು ? ಉಳಿಸಿ ಉಪಯೋಗವಿಲ್ಲ ನಿಮ್ಮ ತಾಯಿ 90 ವರ್ಷ ಆದ ಮೇಲೆ ತೀರಿ ಹೋಗ್ತಾರೆ. ಬಹಳ ಪೂಜ್ಯರು ಒಪ್ತುತ್ತೀನಿ. ಆದರೆ ಆ ಹೆಣ ಇಟ್ಟುಕೊಂಡು ಏನು ಮಾಡ್ತೀರಿ ? ಹಾಗೆ ಸಾಯೋಕೆ ಬಿಡಬೇಕು, ಅದ್ರಿಂದ ಏನು ಸಿಗತ್ತೆ ಅನ್ನೊದು ಮುಖ್ಯ. ಅದರ Essence ತಗೊಂಡು ಉಪಯೋಗಿಸಿಕೊಳ್ಳಿ. ಉದಾಹರಣೆಗೆ ಪಾರಿಜಾತದಲ್ಲಿ Wonder full items, wisdom, theater wisdom, theater concept ಇದೆ ಅದನ್ನ ಬಿಟ್ಟು ಅಪ್ಪ ಮಾಡಿದ್ದನ್ನೇ ಮಾಡ್ತೀನಿ ಅಂದ್ರೆ ಅದರಲ್ಲಿ ಅರ್ಥವಿಲ್ಲ.

* ಕನ್ನಡ ರಾಷ್ಟ್ರೀಯತೆ ಬಗ್ಗೆ ನಿಮ್ಮ ನಿಲುವೇನು ?

೦ ಮನುಷ್ಯ ಹ್ಯಾಗಿರ್ತಾನೆ ಅಂದ್ರೆ ಅವನೊಂದು ಸರ್ಕಲ್ಲು, ನಾನು ಅಂತ ಒಂದಿದೆ. ನನ್ನ ಮನೆ, ಊರು, ಜಿಲ್ಲೆ ಅನ್ನೋದಿದೆ, ಕನ್ನಡ ಅನ್ನೋದು, ಭಾರತ ಪ್ರಪಂಚ ಅನ್ನೊದು ಇದೆ. ಇದೆಲ್ಲಾ Concentric circle ಹಾಗೆ. ಆಯಾ ಸರ್ಕಲ್‌ಗಳಲ್ಲಿ ಒಂದೊಂದು ಕೆಲಸ ಆಗಬೇಕಾಗುತ್ತೆ ಮಿಕ್ಕ ಸರ್ಕಲ್‌ಗಳಲ್ಲಿ ಉಳಿದವುಗಳ ಬಗ್ಗೆ ಕೆಲಸದ ಬಗ್ಗೆ ಮರೆತರೆ ಅದು ಮೋಹ ಅನ್ನುತ್ತೀವೆ.

ನಾವು ಕನ್ನಡ ಎಂದು ಕೂಗುವ ಚಳುವಳಿಕಾರರನ್ನ ಯಾಕೆ ವಿರೋಧಿಸ್ತೀನಿ ಅಂದ್ರೆ, ಆ ಕನ್ನಡ ಅಂತ ಹೇಳುವ ಹೊತ್ತಿಗೆ ಹೆಗ್ಗೋಡು ಅಂತ ಒಂದಿದೆ ಅಲ್ಲಿ ಮನೆಯಿದೆ ಆ ಮನೆಯಲ್ಲಿ ನಾನಿದ್ದೇನೆ. ಈ Entity ಗಳನ್ನೆಲ್ಲಾ ಮರೆಯುತ್ತಾರೆ. ಯಾವುದೊ ಹಂತಗಳಲ್ಲಿ ಕನ್ನಡ ಅತ್ಯಂತ ಅಗತ್ಯ ಕೂಡ ಆಗತ್ತೆ. ಈ ಭಾಷೆ ಕಲ್ಪಿಸುವ ಸಂಸ್ಕೃತಿಯ ದೃಷ್ಟಿಯಿಂದ. ಆದರೆ ಅದೇ ಎಲ್ಲಾ ಹೊತ್ತಿಗೂ ಅಗತ್ಯವಲ್ಲ. ಬೇರೆ Entity ಗಳೂ ಇದಾವೆ. ಮನುಷ್ಯ ಇಷ್ಟು Concentric circle ನಲ್ಲಿ ಇದ್ದಾನೆ ಅನ್ನುವ ಪ್ರಜ್ಞೆ ಇಟ್ಟುಕೊಂಡು ಕೆಲವು ಸಾರಿ ನನಗಾಗಿಯೋ, ವ್ಯಕ್ತಿತ್ವಕ್ಕಾಗಿಯೋ ಮಲೆನಾಡಿಗೂ ಹೊಡೆದಾಡಬೇಕಾಗಿತ್ತೆ. ಚೀನಾದವರು ಬಂದು ಬೀಳ್ತಾರೆ ಅಂದ್ರೆ ಭಾರತಕ್ಕೆ ಹೊಡೆದಾಡಬೇಕಾಗಿತ್ತೆ. ಅಥವಾ ಇಡೀ ಜಗತ್ತೆ ನನ್ನದು ಅಂತ ಹೇಳುವ ಸಂದರ್ಭದಲ್ಲಿ ನಾವು ಕೆಲಸ ಮಾಡುತ್ತಿದ್ದಾಗಲೂ ಬೇರೆ circle ಗಳ ಬಗ್ಗೆ ಎಚ್ಚರ ವಹಿಸಬೇಕಾಗತ್ತೆ.

* ತಾವು ವಿದೇಶಿ ಸಂಸ್ಥೆಗಳಿಂದ ಹಣ ಪಡೆಯುತ್ತಾ ಜಪಾನ್ ಟೌನ್‌ಶಿಪ್ ನಂಥಾ ವಿದೇಶಿ ಕಂಪನಿಗಳನ್ನು ವಿರೋಧಿಸುವುದು ಎಷ್ಟು ಸೂಕ್ತ ?

೦ ಇದು ಸ್ವಲ್ಪ ದೀರ್ಘವಾಗಿ ಹೇಳಬೇಕಾಗತ್ತೆ. ಹಣ ಎಲ್ಲಿಂದ ಬರತ್ತೆ, ಯಾವ ಮೂಲದಿಂದ ಬರತ್ತೆ ? ಒಂದು ದೇಶದಿಂದ ಇನ್ನೊಂದು ದೇಶ ಹಣ ಪಡೆಯೋದು ತಪ್ಪು ಅನ್ನಿಸುವುದಿಲ್ಲ. ಈಹೊತ್ತಿನ ಆಹಾರ, ವಸ್ತುಗಳು ನಮಗೆ

ಎಲ್ಲಿಂದ ಬರುತ್ತವೆ ಎಂದು ಹೇಳಲಿಕ್ಕಾಗಲ್ಲ. ಇದರಲ್ಲಿ ಎಷ್ಟೋ ವಿಷಯಗಳು Involve ಆಗ್ತವೆ. ಇವುಗಳ ಬಗ್ಗೆ ಹಠ ಹಿಡಿದು ವಿರೋಧಿಸುತ್ತೇನೆಂದರೆ ಪ್ರಯೋಜನವಿಲ್ಲ, ಕಾರಣ ನಮ್ಮ ಸರ್ಕಾರಾನೇ ತನ್ನ ಬಜೆಟ್‌ಗಾಗಿ ಸಾಕಷ್ಟು ಹಣ ತಗೊಳ್ಳತ್ತೆ. ನಾವು ಯಾವ ರೀತಿ ಯೋಚನೆ ಮಾಡಬೇಕೆಂದರೆ ; ನನ್ನ ಕ್ರಿಯೆಯ ಮೇಲೆ ಯಾವುದೇ ಪ್ರಭಾವ, ಒತ್ತಡ ಹೇರುವಂತಹ ಹಣ ತೆಗೆದುಕೊಳ್ಳಬಾರದು. ಬಹುಶಃ ವಿದೇಶಿ ಹಣದಲ್ಲಿರುವ ದೊಡ್ಡ ತೊಂದರೆ ಸೃಜನಶೀಲತೆಯನ್ನು ಹಾಳು ಮಾಡುವಂತಹದು. ಆ ಹಣ ನಮ್ಮೂರಿನ ನಿತ್ಯದ Economicsನಿಂದ ಬೇರೆ ಆಗಿರತ್ತೆ. ರೂ. 10 ಖರ್ಚು ಮಾಡುವಲ್ಲಿ 1 ಡಾಲರ್, ನಮ್ಮ ರೂ. 100–200 ಆಗಿಬಿಡತ್ತೆ. ಮತ್ತೆ ಆ ಸುಲಭದ ಹಣ ಸಿಗದೇ ಹೋದರೆ ಏನೂ ಮಾಡಲಿಕ್ಕಾಗಲ್ಲ. ಆ ರೀತಿ ಸಿಕ್ಕ ಹಣದಿಂದ ನನ್ನ ಊರಿನ ಜನರಿಂದ ಕಷ್ಟಪಟ್ಟು ಹಣ ಸಂಗ್ರಹಿಸುವುದು ತಪ್ಪಿಹೋಗತ್ತೆ. ಮತ್ತೆ ಅವರ ಹತ್ತಿರ ಹೋದ್ರೆ ಸಂಬಂಧ ಉಳಿದಿರುವುದಿಲ್ಲ. ಮುಖ್ಯವಾಗಿ ನನ್ನ ಕೆಲಸದ ಮೇಲೆ ಊರಿನ ಜನರ ಹಿಡಿತ ಇರೋದಿಲ್ಲ. ಅವರು ಚೆನ್ನಾಗಿ ಕೆಲಸ ಮಾಡುವಂತೆ ಹೇಳುತ್ತಾರೆ. ಚೆನ್ನಾಗಿ ಮಾಡಿದ್ರೆ ದುಡ್ಡು ಕೊಡ್ತಾರೆ. ನಮ್ಮ ಸಮಾಜಕ್ಕೆ ನಾನು ಜವಾಬ್ದಾರನಾಗಿರುತ್ತೇನೆ. ಈ ಅಪಾಯಗಳನ್ನು ತಪ್ಪಿಸಿ ಕೊಳ್ಳೋದು ಸಾಧ್ಯವಾದರೆ ನೀವೂ ಮಾಡಬಹುದು. ಉದಾಹರಣೆಗೆ ನಾವು ಫೋರ್ಡ್ ಫೌಂಡೇಶನ್‌ನಿಂದ 2 ಬಾರಿ ಹಣ ತಗೊಂಡೆವು. ಅದನ್ನು ಹೆಗ್ಗೋಡಿನಲ್ಲಿ ನಮ್ಮ ಕೇಂದ್ರದ ಕೆಲಸಕ್ಕೆ ಬಳಸಲಿಲ್ಲ. ಸುಮಾರು 70 ಚಲನಚಿತ್ರ–60 ರಂಗಭೂಮಿ ಶಿಬಿರಗಳನ್ನು ಬೇರೆ ಬೇರೆ ಕಡೆ ಮಾಡಿದೆವು. 8 ಕಡೆ ಬೆಳಕಿನ ವ್ಯವಸ್ಥೆ ಮಾಡೋಕೆ ಉಪಯೋಗಿಸಿದೆವು. ಈ ರೀತಿಯಿಂದ ಮಾಡೋದು ತೊಂದರೆ ಅನ್ನಿಸುವುದಿಲ್ಲ.

ಇನ್ನೊಂದು ಜಪಾನ್‌ನವರು ಇಲ್ಲಿ ಬಂದಿರುತ್ತಾರೆ ಅಂದ್ರೆ ನನ್ನದೇನೂ ಅಭ್ಯಂತರವಿಲ್ಲ. ಟಿಬೇಟ್ಟಿನವರು ನಮ್ಮ ಮಧ್ಯೆ ಇದ್ದಾರೆ. ನಾವು ಬೇರೆ ದೇಶಕ್ಕೆ ಹೋದರೆ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಆದರೆ ನಿಮಗಿಂತ ನಾವೇ ಹೆಚ್ಚು ಅಂತ ಭಾವನೆ ಬಂದಲ್ಲಿ ನಾನದನ್ನ ವಿರೋಧಿಸುತ್ತೇನೆ. ಯಾವನೇ ಆಗಲಿ ನನ್ನ ಮನೆಗೆ ಬಂದು ಇರ್‍ತಾನೆ ಅಂದ್ರೆ ನಾನು ತಿನ್ನುವಂತಹ ಆಹಾರ ಆತನೂ ತಿನ್ನಬೇಕು. ನನ್ನ ವಾತಾವರಣದಲ್ಲಿ ಬದುಕಬೇಕು. ಅದನ್ನು ಬಿಟ್ಟು, ಬೇಕಾದ ರೀತಿಯಲ್ಲಿ ಇರ್‍ತೇನೆ ; ನಿಮ್ಮ ಮನೆಯಲ್ಲಿ ಬಂದರೆ Air-condition ರೂಮೇ ಬೇಕು ಅಥವ Terms Deictate ಮಾಡುತ್ತಾನೆ ಅಂದ್ರೆ ಅದು ಗುಲಾಮಗಿರಿ. ನಾನದನ್ನ ಒಪ್ಪೋದಿಲ್ಲ.

* ಸಾಹಿತ್ಯದ ಶ್ರೇಷ್ಠತೆಯ ಬಗ್ಗೆ ನಿಮ್ಮ ಅನಿಸಿಕೆ ವಿಭಿನ್ನವಾದದ್ದು ಎನಿಸುತ್ತದೆ. ಆ ಬಗ್ಗೆ ನಿಮ್ಮ ಪರಿಕಲ್ಪನೆ ಏನು ?

ಂ ಇದು ಸಾಹಿತ್ಯಕ್ಕಷ್ಟೇ ಅಲ್ಲ ಜೀವನಕ್ಕೆ, ಜೀವನ ಕ್ರಮಕ್ಕೂ ಹೌದು. ಶ್ರೇಷ್ಠತೆಯನ್ನು ಸಾಧಿಸಬೇಕು ಆದರೆ ಎಷ್ಟೋ ಸಾರಿ ಇದನ್ನು ಸಾಧಿಸುವ ಹಠದಲ್ಲಿ ನಾವೋ ಅಥವ ಆ ಶ್ರೇಷ್ಠತೆಯೋ eleminate ಆಗಿಬಿಡತ್ತೆ. ಮೊದಲೇ ಹೇಳಿದಂತೆ ಸ್ವಾತಂತ್ರ್ಯ ಮತ್ತು ಸಮಾನತೆ ಇವುಗಳಲ್ಲಿ ಮೊದಲನೆಯದು excellence ಆದರೆ ಇನ್ನೊಂದು accesibality ಆಗತ್ತೆ. ನಾನು ಶ್ರೇಷ್ಠತೆಯನ್ನು ಸಾಧಿಸಿ ಅದು ಸಮಾಜಕ್ಕೆ ಸಿಗಲಾರದ್ದಾದರೆ ಪ್ರಯೋಜನವಿಲ್ಲ. ಯಾವುದೋ ಸುಂದರ ಸ್ಥಳದಲ್ಲಿ ಹತ್ತು ಜನ ಒಳ್ಳೆಯ ವಿದ್ವಾಂಸರಿಂದ ಮಾಡುವ ಯೂನಿವರ್ಸಿಟಿ ಕೆಲಸಕ್ಕಿಂತ ನನ್ನ ಊರಿನ ಜನರನ್ನು ಅಕ್ಷರಸ್ಥರನ್ನಾಗಿಸುವ ಕೆಲಸ ಚೆನ್ನಾಗಿರತ್ತೆ. ಸಾಮಾನ್ಯವಾಗಿ ಸಮಾಜದಲ್ಲಿ ನೂರಾರು ಕನಸುಗಳು, ಕಲ್ಪಗಳು ಅಸ್ಪಷ್ಟವಾಗಿ ಸುಪ್ತ ಮನಸ್ಸಿನಲ್ಲಿ ಇದ್ದ ಹಾಗೆ ಇರ್ತವೆ. ಇವೆಲ್ಲಾ ಒಬ್ಬ ವ್ಯಕ್ತಿಯಲ್ಲಿ consolidated ಆಗಿ explore ಆಗುತ್ತೆ. ಅವನು ಸ್ವಲ್ಪ ಔನತ್ಯ ಸಾಧಿಸುತ್ತಾ ಬರ್ತಾನೆ. ಅದು ಅಲ್ಲಿ ಇದ್ದರೆ ಪ್ರಯೋಜನ ಇಲ್ಲ, ಅದು ಅಜೀರ್ಣವಾಗುತ್ತೆ. ಸಮಾಜದಲ್ಲಿ ಯಾವಾಗಲೂ ಈ excellence ಸಾಧಿಸಿದ ವ್ಯಕ್ತಿಗಿಂತ ಕೆಳಗಿನವರನ್ನು ಮೇಲಕ್ಕೆ ಎತ್ತಬೇಕಾಗತ್ತೆ, ಇದು ಇತಿಹಾಸದ ಚಲನೆ. ಎರೆಹುಳುವಿನ ಹಾಗೆ ಮೇಲಿದ್ದವನು ಕೆಳಕ್ಕೆ ಬಂದು ಸಮಾಜವನ್ನು ಚೂರು ಎತ್ತಿಕೊಂಡು ಮೇಲಕ್ಕೆ ಹೋಗಿ....ಹೀಗೆ. ನಡೆಯಬೇಕು ಅನ್ನುವುದು ನನ್ನ ಭಾವನೆ. ಆದ್ರಿಂದ excellence ಮತ್ತು accessibality ಎರಡರ ಕಡೆಗೂ ಗಮನ ಕೊಡಬೇಕು.



"ನನ್ನ ಮನೆಯು. ಸುತ್ತ ಗೋಡೆ ಕಟ್ಟಿಕೊಂಡು ಕಿಟಕಿಗಳನ್ನೆಲ್ಲ
ತುರುಕಿ ಮುಚ್ಚಿಟ್ಟುಕೊಳ್ಳಲು ನನಗೆ ಇಷ್ಟವಿಲ್ಲ.
ಎಲ್ಲ ನೆಲದ ಸಂಸ್ಕೃತಿಗಳೂ ಆದಷ್ಟು ಮಟ್ಟಿಗೆ ತಡೆಯಿಲ್ಲದೆ
ಮನೆಯ ಸುತ್ತ ಬೀಸುತ್ತಿರಬೇಕೆಂದು ನನ್ನ ಆಸೆ. ಆದರೆ
ಬೀಸುವ ಗಾಳಿಯಲ್ಲಿ ನಾನೇ ಕಾಲು ಕಿತ್ತು ಬೀಸಿ ಹೋಗುವುದನ್ನು
ಮಾತ್ರ ಪ್ರತಿರೋಧಿಸುತ್ತೇನೆ"

ಮಹಾತ್ಮಗಾಂಧಿ

# ಜೀವನಶೈಲಿ ಮತ್ತು ಪರಿಸರ

**ಸಂತೋಷ ಕೌಲಗಿ**

ಜನಪದ ಸೇವಾ ಟ್ರಸ್ಟ್, ಮೇಲುಕೋಟೆ, ಮಂಡ್ಯ ಜಿಲ್ಲೆ–571 431

ಜೀವನ ಶೈಲಿ ಮತ್ತು ಪರಿಸರ ಇಂದು ಒಂದಕ್ಕೊಂದು ಅತಿ ಹೆಚ್ಚಿನ ಸಂಬಂಧ ಪಡೆದಿರುವ ಎರಡು ಶಬ್ದಗಳು. ಬಹುಶಃ ಈ ಶತಮಾನದ ಪ್ರಾರಂಭದವರೆಗೆ ಸಾಮಾನ್ಯ ಜನರಿಗೆ ಈ ಎರಡೂ ಶಬ್ದಗಳಿಗೆ ಸಂಬಂಧ ಇರಬಹುದೆಂಬ ಕಲ್ಪನೆಯೂ ಇದ್ದಿರಲಿಕ್ಕಿಲ್ಲ. ಹೀಗೆಂದ ಮಾತ್ರಕ್ಕೆ ನಮ್ಮ ಹಿಂದಿನವರೆಲ್ಲರೂ ಪರಿಸರಕ್ಕೆ ಅಪಾಯ ತರುವಂತಹ ಜೀವನ ನಡೆಸುತ್ತಿರಲಿಲ್ಲ ಎಂದು ಅರ್ಥವಲ್ಲ. ಬಹುಶಃ ಇಂದು ನಮ್ಮೆಲ್ಲರ ತಲೆತಿನ್ನುತ್ತಿರುವ "ಮಾನವನಿಂದಾಗಿ ಪರಿಸರ ವಿನಾಶದ"ದ ಸಮಸ್ಯೆಯು ಹುಟ್ಟು ಮನುಷ್ಯ ಎರಡು ಕಾಲಿನ ಮೇಲೆ ನಡೆಯಲು ಪ್ರಾರಂಭಿಸಿದ ದಿನದಿಂದಲೇ ಪ್ರಾರಂಭವಾಯಿತೇನೋ ?

ಈಶತಮಾನದ ಮಧ್ಯದಲ್ಲಿ ಪ್ರಾರಂಭವಾದ ಅಭಿವೃದ್ಧಿ ಮತ್ತು ಪರಿಸರ ಎಂಬ ವಿಚಾರ ಹೆಚ್ಚು ಸ್ಪಷ್ಟವಾಗುತ್ತಾ ಹೋಗಿ ಇಂದು ಜೀವನ ಶೈಲಿ ಮತ್ತು ಪರಿಸರ ಎಂಬ ಘಟ್ಟ ತಲುಪಿದೆ. ಹಿಂದಿನ ಎಲ್ಲ ತಲೆಮಾರುಗಳ ಜನಸಾಮಾನ್ಯರ ಮೌಲ್ಯಗಳು, ಆಗಿನ ತಂತ್ರಜ್ಞಾನ, ಆಗಿನ ಜನಸಂಖ್ಯೆ ಹೀಗೆ ಎಲ್ಲವೂ ಆಗಲೂ ಪರಿಸರದ ಮೇಲೆ ದುಷ್ಪರಿಣಾಮ ಬೀರುತ್ತಿದ್ದಿರಲೇ ಬೇಕು. ಪ್ರಕೃತಿಯ ನಿಯಮಕ್ಕೆ ವಿರುದ್ಧವಾದದ್ದೇ ಇರಬೇಕು. ಆದರೂ ಅಂದು ಭೂಮಿಗೆ ಮನುಷ್ಯನ ಎಲ್ಲ ತಪ್ಪುಗಳನ್ನೂ ಹೊಟ್ಟೆಗೆ ಹಾಕಿಕೊಳ್ಳುವ ಶಕ್ತಿಯಿತ್ತು. ಆದರಿಂದಾಗಿ ಹಿಂದಿನ ತಲೆಮಾರಿನ ಜನಕ್ಕೆ ಅವರ ಜೀವನ ಶೈಲಿಗೂ ಪರಿಸರಕ್ಕೂ ಇರಬಹುದಾದ ಸೂಕ್ಷ್ಮ ಸಂಬಂಧದ ಬಗ್ಗೆಯಾಗಲೀ, ತಮ್ಮ ಜೀವನ ವಿಧಾನದಿಂದ ಪ್ರಕೃತಿಯ ಮೇಲೆ ಆಗುತ್ತಿರುವ ದುಷ್ಪರಿಣಾಮದ ಬಗ್ಗೆಯಾಗಲೀ ಚಿಂತಿಸುವ ತಮ್ಮ ಬದುಕಿನ ರೀತಿಯನ್ನು ವಿಮರ್ಶಿಸಿಕೊಳ್ಳುವ ಅಗತ್ಯವೇ ಬರಲಿಲ್ಲ. ತಮಗೆ ತೋರಿದಂತೆ ಪ್ರಕೃತಿಯನ್ನು ಬಳಸಿಕೊಳ್ಳುವ, ಬದುಕುವ ದಿನಗಳಾಗಿದ್ದವು ನಮ್ಮ ಹಿಂದಿನವರದು.

ಆದರೆ ಇಂದು ! ಮನುಷ್ಯ ಎರಡು ಕಾಲಿನ ಮೇಲೆ ನಿಂತಾಗ ಅತಿ ಸಣ್ಣದಾಗಿ ಪ್ರಾರಂಭವಾದ ಸಮಸ್ಯೆಯು ಇಂದು ನಮ್ಮ ಮೌಲ್ಯಗಳಿಂದಾಗಿ, ನಮ್ಮ ತಂತ್ರಜ್ಞಾನದ ಅಹಂನಿಂದಾಗಿ, ನಮ್ಮ ಸಂಖ್ಯೆಯಿಂದಾಗಿ, ನಮ್ಮ ಬದುಕಿನ ರೀತಿಯಿಂದಾಗಿ ಇಡೀ

ಪ್ರಪಂಚವನ್ನೇ ನುಂಗಿ ಬಿಡಬಹುದಾದಷ್ಟು ದೊಡ್ಡದಾಗಿ ಬೆಳೆದು ನಿಂತಿದೆ. ಭೂಮಿಯ ಆರೋಗ್ಯ ದಿನದಿಂದ ದಿನಕ್ಕೆ ಹದಗೆಡುತ್ತಿದೆ. ನಿಸರ್ಗವನ್ನು ಬಗ್ಗುಬಡಿದು ಅಭಿವೃದ್ಧಿ ಸಾಧಿಸಹೊರಟ ಮಾನವನ ದಾಳಿಗೆ ನೆಲನಲುಗಿದೆ. ಅಂತರ್ಜಲದಿಂದ ಹಿಡಿದು ಹಿಮ ಖಂಡಗಳೂ ಕಲುಷಿತವಾಗುತ್ತಿದೆ. ಅಂತರಿಕ್ಷದ ಓಸೋನ್ ರಕ್ಷಾಕವಚ ಛಿದ್ರವಾಗುತ್ತಿದೆ, ಪ್ರತಿವರ್ಷ ಸುಮಾರು ೨ ಲಕ್ಷ ಹೆಕ್ಟೇರ್ ಕಾಡು ಕಣ್ಮರೆಯಾಗುತ್ತಿದೆ. ಇಂತಹ ನಿರಾಶಾದಾಯಕ ಕಷ್ಟಕರ ಪರಿಸ್ಥಿತಿಯಲ್ಲಿ ಪ್ರತಿವರ್ಷ ೧ ಕೋಟಿ ಹೊಸಜೀವಿಗಳು ಮನುಕುಲವನ್ನು ಸೇರುತ್ತಿವೆ. ಈಪರಿಯ ನಾಜೂಕಾದ ಪರಿಸ್ಥಿತಿಯಲ್ಲಿ ಪರಿಸರಕ್ಕೆ ಇನ್ನೂ ಹೆಚ್ಚಿನ ನೋವಾಗದೆ, ಸಹ ಜೀವಿಗಳಿಗೆ ತೊಂದರೆಯಾಗದೆ ಸುಖವಾಗಿ ಬದುಕುವುದು ಮನುಷ್ಯನಿಗೆ ದೊಡ್ಡ ಸವಾಲಾಗಿದೆ.

ಔದ್ಯೋಗಿಕ ಕ್ರಾಂತಿಯ ನಂತರ ಹೆಚ್ಚುಹೆಚ್ಚು ಸಂಪನ್ಮೂಲಗಳ ಬಳಕೆ ಎಂದರೆ ಹೆಚ್ಚುಹೆಚ್ಚು ಅಭಿವೃದ್ಧಿ ಎಂಬ ವಿಚಾರ ಮೊದಲಿಗೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಹುಟ್ಟಿಕೊಂಡಿತು. ಈ ವಿಚಾರವನ್ನು ಆಚರಣೆಗೆ ತಂದ ಮೊದಲ ಕೆಲವು ಅಮೇರಿಕ ಹಾಗೂ ಯುರೋಪಿನ ರಾಷ್ಟ್ರಗಳು ಪ್ರಪಂಚದ ಎಲ್ಲ ಸಂಪನ್ಮೂಲಗಳನ್ನು ಬಳಸಿಕೊಂಡು ಐಶಾರಾಮವಾದಂತಹ ಜೀವನವನ್ನು ನಡೆಸಲು ಪ್ರಾರಂಭಿಸಿದವು. ಪ್ರಪಂಚದ ಎಲ್ಲ ರಾಷ್ಟ್ರಗಳೂ ಈ ವಿಚಾರವೇ ಸರಿ, ಆ ರಾಷ್ಟ್ರಗಳ ಹಾದಿಯೇ ಸರಿ ಎಂದು ಭಾವಿಸಿ ಆ ದಿಕ್ಕಿನಲ್ಲೇ ಹೆಜ್ಜೆ ಇಡಲು ಪ್ರಾರಂಭಿಸಿದವು. ಭೂಮಿಯ ಮೇಲಿನ ಹೆಚ್ಚಿನ ಸಂಪನ್ಮೂಲಗಳನ್ನು ಬಳಸಿಕೊಂಡು ೨೦ ಮಂದಿ ಪಡೆದ ಸುಖ ಜೀವನವನ್ನು ಮಿಕ್ಕ ೮೦ ಮಂದಿಯೂ ಪಡೆಯಲು ಹೋದಾಗ ಪ್ರಕೃತಿಯ ಸಮತೋಲನ ಏರುಪೇರಾಯಿತು. ೨೦ ಮಂದಿ ಪಡೆಯುತ್ತಿದ್ದ ಸುಖವನ್ನು ಪಡೆಯಲು ಅಭಿವೃದ್ಧಿ ಶೀಲ ರಾಷ್ಟ್ರಗಳು ಸಾಲದ ಹೊರೆಯನ್ನು ಹೊರ ತೊಡಗಿದವು. ಇದರಿಂದಾಗಿ ಅವುಗಳ ಬಂಡವಾಳ ಕಡಿಮೆಯಾಗುತ್ತಾ ಹೋಗಿ ಅವುಗಳನ್ನು ತುಂಬಿಕೊಳ್ಳಲು ಅರಣ್ಯ ಮತ್ತು ಇತರ ಪ್ರಾಕೃತಿಕ ಸಂಪನ್ಮೂಲಗಳನ್ನು ದೋಚಲೇಬೇಕಾದ ಪರಿಸ್ಥಿತಿ ಅವುಗಳಿಗೆ ಬಂದೊದಗಿತು. ಇದೆಲ್ಲ ನಮಗೆ ಅರ್ಥವಾಗುವ ಹೊತ್ತಿಗೆ ತಂತ್ರಜ್ಞಾನದಿಂದಾಗಿ ಪ್ರಪಂಚ ಬಹಳ ಚಿಕ್ಕದಾಗಿಹೋಗಿದೆ. ಪರಸ್ಪರ ಅವಲಂಬನೆ ಅನಿವಾರ್ಯವಾಗಿ ಹೋಗಿದೆ. ಗ್ರಾಮ ಮಟ್ಟದಲ್ಲಿ, ರಾಜ್ಯ ಮಟ್ಟದಲ್ಲಿ ನಮ್ಮ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಸಾಧ್ಯವಾಗದಾಗಿದೆ. ಆದರಲ್ಲೂ ಪರಿಸರ, ಜೀವನ ವಿಧಾನ ಮುಂತಾದವನ್ನು ಅಂತರ ರಾಷ್ಟ್ರೀಯ ಮಟ್ಟದಲ್ಲೇ ಚಿಂತಿಸಬೇಕಾಗಿದೆ. ಇಂದು ಪ್ರಪಂಚ ಎಷ್ಟು ಚಿಕ್ಕದಾಗಿ ಹೋಗಿದೆ ಎಂದರೆ ನ್ಯೂಯಾರ್ಕಿನಲ್ಲಿ ಕಟ್ಟುವ ಕಟ್ಟಡಕ್ಕೂ ದೊಡ್ಡ ಬಳ್ಳಾಪುರದ ಕಲ್ಲಿಗೂ ನೇರ ಸಂಬಂಧ ಉಂಟಾಗಿದೆ. ನಾನು ಮೇಲುಕೋಟೆಯಲ್ಲಿ ಕಟ್ಟುವ ಕಟ್ಟಡದ ಮರದ ತೀರಿಗೂ ಮಲೇಶಿಯಾದ ಕಾಡಿಗೂ ನಂಟಸ್ತಿಕೆ ಬೆಳೆದಿದೆ. ಹೀಗಿರುವಾಗ ನ್ಯೂಯಾರ್ಕಿನಲ್ಲಿರುವ ಜನ ತಮ್ಮ ಕಟ್ಟಡದ ವಿನ್ಯಾಸದ ಬಗ್ಗೆ ಬೇರೆ

ರೀತಿ ಯೋಚಿಸದಿದ್ದರೆ ದೊಡ್ಡಬಳ್ಳಾಪುರದ ಕಲ್ಲಿಗೆ ಉಳಿಗಾಲವಿಲ್ಲ ಹಾಗೆಯೇ ಮೇಲು ಕೋಟೆಯ ನನ್ನ ಮನೆಯ ತೀರಿಗೆ ಪರ್ಯಾಯ ಕಂಡುಕೊಳ್ಳದಿದ್ದರೆ ಮಲೇಶಿಯಾದ ಸಾಲ್ ಮರಗಳಿಗೆ ಉಳಿಗಾಲವಿಲ್ಲ. ಇಂತಹ ಪರಿಸ್ಥಿಯಲ್ಲಿ ಪ್ರಪಂಚದ ಯಾವುದೋ ಮೂಲೆಯಲ್ಲಿ ಒಂದಿಷ್ಟು ಜನ ತಮ್ಮ ಜೀವನ ಶೈಲಿಯನ್ನು ಬದಲಿಸಿಕೊಂಡರೆ ಯಾವ ಬದಲಾವಣೆಯೂ ಆಗದು. ಇದರಿಂದ ಅವರ ಸುತ್ತಲಿನ ಪರಿಸರವೇನು ಉಳಿಯದು. ಆದ್ದರಿಂದ ಈ ಭೂಮಿಯನ್ನು ಕಾಪಾಡಲು ಜಾಗತಿಕ ಮಟ್ಟದಲ್ಲಿ ಪರಿಸರದ ಉಳಿವಿಗೆ ಪೂರಕವಾದ ಹೊಸ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ವ್ಯವಸ್ಥೆ ಉಂಟಾಗ ಬೇಕು.

ಪರಿಸರದ ಉಳಿವಿಗಾಗಿ ನಮ್ಮ ಜೀವನ ಶೈಲಿಯ ಬದಲಾವಣೆಯಾಗಬೇಕಾಗಿದೆ ನಿಜ. ಹೀಗೆಂದ ಮಾತ್ರಕ್ಕೆ ಯಾವ ಹಂತದಲ್ಲಿ, ಯಾವ ವೇಗದಲ್ಲಿ, ಯಾವ ದಿಕ್ಕಿನಲ್ಲಿ ಬದಲಾವಣೆ ಎಂಬುದು ಚರ್ಚೆಯ ವಿಷಯವಾಗಿಯೇ ಉಳಿಯುತ್ತದೆ.

ಪರಿಸರಕ್ಕೆ ಪೂರಕವಾದ ಜೀವನ ವಿಧಾನವನ್ನು ನಡೆಸಿ ಹೊಸ ದಿಕ್ಕನ್ನು ತೋರಿಸಿದ ಮಂದಿ ಅಮೇರಿಕಾದ ಸ್ಕಾಟ್‌ನಿಯರಿಂಗ್ ಅವರಿಂದ ಹಿಡಿದು ಜಪಾನಿನ ಫುಕುವೊಕಾ ಅವರವರಗೆ ಅನೇಕ ಮಂದಿ ಇದ್ದಾರೆ. ಆದರೆ ಅವರೆಲ್ಲರ ಜೀವನಗಳು ಆದರ್ಶದ ಬದುಕಿನ ಮೆಟ್ಟಿಲಿನ ಮೇಲಿಂದ ಕೆಳಗೆ ಇಳಿದಂತೆ ಕಾಣಿಸದೆ, ಸಾಮಾನ್ಯನ ದಿನ ದಿನದ ಬದುಕಿನಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಿಲ್ಲವೇನೋ ಎನಿಸಿಬಿಡುತ್ತದೆ. ಆದ್ದರಿಂದ ಪರ್ಯಾಯ ಜೀವನಶೈಲಿಯನ್ನು ಯೋಚಿಸುವಾಗ, ಹುಡುಕಲು ಪ್ರಯತ್ನಿಸು ವಾಗ ಆ ಜೀವನಶೈಲಿ ಸಾಮಾನ್ಯ ಜನರು ಸುಲಭವಾಗಿ ಅಳವಡಿಸಿಕೊಳ್ಳಲು ಸಾಧ್ಯ ವಾಗುವಂತಿರಬೇಕು. ನಾವು ಹೇಳುವ, ತಂತ್ರಜ್ಞಾನ ಪರಿಸರಕ್ಕೆ ಪೂರಕವಾಗಿದ್ದು ಚಾಲ್ತಿಯಲ್ಲಿರುವ ತಂತ್ರಜ್ಞಾನದೊಂದಿಗೆ ಸ್ಪರ್ಧಿಸುವಷ್ಟು ಶಕ್ತಿಶಾಲಿಯಾಗಿರಬೇಕು. ಏಕೆಂದರೆ ಜನ ಸಾಮಾನ್ಯರಿಗೆ ತಾವು ಉಪಯೋಗಿಸುವ ವಿದ್ಯುತ್ ಅಣುಸ್ಥಾವರದಿಂದ ಬಂದದ್ದೊ, ಗಾಳಿಯಂತ್ರದಿಂದ ಬಂದದ್ದೋ ಎಂದು ಯೋಚಿಸುವಷ್ಟು ವ್ಯವಧಾನ ವಿರುವುದಿಲ್ಲ. ಜನ ಸಾಮಾನ್ಯರಿಗೆ ಬೇಕಾದದ್ದು ಸುಲಭವಾಗಿ, ಕಡಿಮೆ ದರದಲ್ಲಿ ಸಿಗುವಂತಹ ಅನುಕೂಲಗಳು, ಕೈಗಾರಿಕಾ ಕ್ರಾಂತಿಗಾಗಿ ಯಾವ ರೀತಿಯಲ್ಲಿ ಪ್ರಯತ್ನ ನಡೆಯಿತೋ ಅದೇ ದೆಸೆಯಲ್ಲಿ ಈ ಪ್ರಯತ್ನವೂ ನಡೆದರೆ ಅದು ಸಾಧ್ಯ.

ಹೇಗೆ ಹೊಸ ಜೀವನ ಶೈಲಿಗೆ ಜಾಗತಿಕ ಮಟ್ಟದಲ್ಲಿ ಪ್ರಯತ್ನ ನಡೆಯುವುದ ರೊಂದಿಗೆ, ಸರಳವಾದ ತಂತ್ರಜ್ಞಾನವನ್ನು ರೂಪಿಸುವುದರೊಂದಿಗೆ ಜನಕ್ಕೆ ಪರಿಸರದ ಬಗ್ಗೆ ಕಾಳಜಿ ಮೂಡುವಂತಹ ಶಿಕ್ಷಣ ಕೊಡಬೇಕಾಗಿದೆಯೋ, ಹಾಗೆಯೇ ಪ್ರಕೃತಿಗೆ ನಿಮ್ಮ ಅಗತ್ಯಗಳನ್ನು ಪೂರೈಸುವ ಶಕ್ತಿ ಇದೆ ಆದರೆ ನಿಮ್ಮ ದುರಾಸೆಗಳನ್ನೆಲ್ಲಾ ಎಂಬ ಗಾಂಧೀಜಿಯ ಮಾತನ್ನು ಮನದಟ್ಟು ಮಾಡಿಕೊಡಬೇಕಾಗಿದೆ.



ಅನುವಾದ

# ಸೃಜನಶೀಲತೆ ಕುರಿತು

**ಓಷೊ ರಜನೀಶ್**

ಸಂಗ್ರಹ : **ಜಿ. ಸುರೇಶ್**

2664, 3ನೇ ಮೇನ್, ವಾಲ್ಮೀಕಿ ರಸ್ತೆ, ವಿ. ವಿ. ಮೊಹಲ್ಲ, ಮೈಸೂರು–570 002

ಸೃಜನಶೀಲತೆ ಯಾವುದೇ ಒಂದು ಕ್ರಿಯೆಗೆ ಸಂಬಂಧಿರುವುದಲ್ಲ. ಚಿತ್ರ ರಚನೆಯಾಗಲೀ ಕವಿತೆ ಅಥವಾ ಹಾಡುವ ವಿಶಿಷ್ಟ ಪ್ರಕಾರಗಳಿಗಷ್ಟೇ ಅದು ಸೀಮಿತವಾದುದಲ್ಲ, ನೀವು ಆ ಗುಣವನ್ನ ಅಳವಡಿಸುವುದಾದರೆ ಯಾವುದೇ ಕೆಲಸವಾದರೂ ಸೃಜನಶೀಲವಾಗಬಲ್ಲದು. ಯಾವುದೇ ಒಂದು ಕ್ರಿಯೆ ತಾನೇತಾನಾಗಿ ಸೃಜನಶೀಲವಾಗಿರುವುದಿಲ್ಲ. ನೀವು ತೀರಾ ಸೃಜನಾತ್ಮಕವಾಗಿ ಚಿತ್ರಬರೆಯದಿರಬಹುದು ಆದರೆ ಅಷ್ಟೇ ಸೃಜನಾತ್ಮಕವಾಗಿ ನೆಲವನ್ನ ಶುಚಿಗೊಳಿಸಬಹುದು, ಸೃಜನಾತ್ಮಕವಾಗಿ ಅಡುಗೆ ಮಾಡಬಹುದು. ಸೃಜನಾತ್ಮಕತೆ ಎನ್ನುವುದು ನೀವು ನಿಮ್ಮ ಕ್ರಿಯೆಗಳಲ್ಲಿ ತುಂಬುವ ವಿಶಿಷ್ಟತೆ' ಅದೊಂದು ಮನೋವೃತ್ತಿಯಾಗಿ ನೀವು ವಿಷಯಗಳನ್ನ ಗ್ರಹಿಸುವ ವಿಶಿಷ್ಟ ಕ್ರಮವಾಗಿ ಬೆಳೆಯುತ್ತದೆ. ಮೊದಲಿಗೆ ನಾವು ನೆನಪಿಡಬೇಕಾದ ಸಂಗತಿ ಎಂದರೆ ಸೃಜನಶೀಲತೆಯನ್ನ ಯೊವುದೇ ಕೆಲವು ನಿರ್ದಿಷ್ಟ ಕ್ರಿಯೆಗಳಿಗಷ್ಟೇ ಸೀಮಿತಗೊಳಿಸದಿರುವುದು.

ಮನುಷ್ಯ ತಾನು ಸೃಜನಶೀಲ ಅವನ ಪ್ರತಿಯೊಂದು ಕ್ರಿಯೆಯಲ್ಲೂ ನಡೆಯೋಡುಗಳಲ್ಲೂ, ಕೂಡುವುದರಲ್ಲೂ ಸೃಜನಶೀಲತೆಯಿದೆ. ಅದರಲ್ಲೂ ಮೌನವಾಗಿ ಕೂಡುವುದು ಒಂದು ಪ್ರಚಂಡ ಸೃಜನಶೀಲಕ್ರಿಯೆ, ಏನೊಂದೂ ಮಾಡದೆ ಸುಮ್ಮನೆ ಮರದಡಿಯಲ್ಲಿ ಕುಳಿತಿದ್ದ ಬುದ್ಧ ಈ ಜಗತ್ತು ಕಂಡ ಮಹಾನ್ ಸೃಜನಶೀಲ ವ್ಯಕ್ತಿ !

ಸೃಜನಾತ್ಮಕತೆ ಎನ್ನುವುದು ನಿಮ್ಮೊಳಗಿರುವಂಥಾದ್ದು ಅಥವಾ ಇಲ್ಲದೇ ಇರುವಂಥಾದ್ದೆಂದು ಒಮ್ಮೆ ನಿಮಗರ್ಥವಾದರೆ ಸಾಕು. ಸೃಜನಾತ್ಮಕತೆ ಕುರಿತ ನಿಮ್ಮ ಸಮಸ್ಯೆಗಳಿಗೆಲ್ಲಾ ಪರಿಹಾರ ದೊರಕಿದಂತೆ, ಪ್ರತಿಯೊಬ್ಬರೂ ನೃತ್ಯಗಾರನಾಗಲೀ ಚಿತ್ರಕಲಾವಿದನಾಗಲೀ ಅಗಲು ಅಸಾಧ್ಯ, ಹಾಗಾಗುವ ಅಗತ್ಯವೂ ಇಲ್ಲ. ಹಾಗಾಗಿದ್ದರೆ ಈ ಜಗತ್ತು ವಿಕಾರವಾಗಿ ಕಾಣಬೇಕಿತ್ತು. ಪ್ರತಿಯೊಬ್ಬರೂ ತಾವು ತಮ್ಮ ಕ್ರಿಯೆಯಲ್ಲಿ ಸಂತೋಷ ಕಂಡುಕೊಂಡರೆ ಅದೊಂದು ಸೃಜನಾತ್ಮಕ ಕ್ರಿಯೆಯಾಗುತ್ತದೆ. ನೀವು ಪ್ರೀತಿಸಿ ಮಾಡುವ ಯಾವುದೇ ಕೆಲಸ ಮತ್ತೊಂದರ ಅನುಕರಣೆ ಅಥವಾ ನಾಟಕ

ವಾಗದೇ ವ್ಯಾಪಾರವೂ ಆಗದೇಇದ್ದರೆ ಅದೊಂದು ಸೃಜನಾತ್ಮಕ ಕ್ರಿಯೆಯಾಗುತ್ತದೆ.

ನೀವು ಹೆಚ್ಚು ಸೃಜನಾತ್ಮಕವಾಗುವ ಮೂಲಕ ಹೆಚ್ಚು ದೈವಿಕವಾಗುತ್ತೀರಿ. ಜಗತ್ತಿನ ಎಲ್ಲಾ ಧರ್ಮಗಳೂ ಹೇಳಿದ್ದು "ದೇವರು ಸೃಷ್ಟಿಕರ್ತ" ಎಂದು. ಆದರೆ ನನಗೂ ತಿಳಿದಿಲ್ಲ, ದೇವರು ಸೃಷ್ಟಿಕರ್ತನೆ ಅಲ್ಲವೆ ಎನ್ನುವ ವಿಚಾರ. ಒಂದು ಸಂಗತಿ ಸ್ಪಷ್ಟವಾಗಿ ಹೇಳಬಲ್ಲೆ ನೀವು ಹೆಚ್ಚು ಹೆಚ್ಚು ಸೃಜನಾತ್ಮಕವಾಗತೊಡಗಿದ ಹಾಗೆ ನೀವು ದೈವಿಕವಾಗುತ್ತೀರಿ, ನಿಮ್ಮ ಸೃಜನಾತ್ಮಕತೆ ಒಂದು ಉತ್ಕರ್ಷ ಮುಟ್ಟತೊಡಗಿದ ಹಾಗೆ ನೀವು ದೇವರಲ್ಲಿ ಬದುಕುತ್ತೀರಿ.

ನೀವು ಮಾಡುವ ಕೆಲಸಗಳಲ್ಲಿ ಸಂತೋಷ ಪಡುವುದಾದರೆ ಅಂಥಾ ಸೃಜನಾತ್ಮಕ ಕೆಲಸವೊಂದರ ನಂತರ ನೀವು ಅದೇ ಆಗಿರುವುದಿಲ್ಲ. ನಿಮ್ಮ ಸೃಜನಾತ್ಮಕ ಕೆಲಸವನ್ನ ಕುರಿತು ಸುದ್ದಿ ಮಾಧ್ಯಮಗಳು ಪ್ರಚಾರ ನೀಡದಿರಬಹುದು ಅಥವಾ ಇತಿಹಾಸ ನಿಮ್ಮನ್ನ ಪರಿಗಣಿಸದೇ ಇರಬಹುದು ಆದರೆ ಅವೆಲ್ಲಾ ಅವಾಸ್ತವ. ಸೃಜನಾತ್ಮಕತೆಯ ಮೌಲ್ಯ ನಮ್ಮೊಳಗಿನದ್ದು ನಾವು ಪಡೆಯುವ ನಮ್ಮೊಳಗಿನ ಬೆಳವಣಿಗೆಯದ್ದು, ನೀವು ಪ್ರಸಿದ್ಧಿ ಬಯಸುತ್ತಾ ನಿಮ್ಮನ್ನ ನೀವು ಸೃಜನಶೀಲವ್ಯಕ್ತಿ ಎಂದುಕೊಳ್ಳುವುದಾದರೆ ನೀವು ಸೃಜನಾತ್ಮಕತೆಯಿಂದ ದೂರ ಸರಿಯುತ್ತೀರಿ. ಜೊತೆಗೆ ನೀವೊಬ್ಬ ರಾಜಕಾರಣಿಯ ಹಾಗೆ ಮಹತ್ವಾಕಾಂಕ್ಷೆ ಉಳ್ಳವರಾಗುತ್ತೀರಿ. ಪ್ರಸಿದ್ಧಿ ಸಿಗುವುದಾದರೆ ಅಥವಾ ಸಿಗದಿದ್ದರೆ ನೀವು ಅದನ್ನ ಪರಿಗಣಿಸಬೇಕಾಗಿಲ್ಲ, ನಿಮ್ಮ ಕೆಲಸಗಳಲ್ಲಿ ನೀವು ಪಡುವ ಸಂತೋಷದ ಕಡೆ ಗಮನವಿರಿಸಬೇಕಾಗುತ್ತದೆ. ನೀವು ಪ್ರೀತಿಸಿ ಮಾಡುವ ಕೆಲಸದಲ್ಲಿ ಸೃಜನಾತ್ಮಕವಾಗುತ್ತೀರಿ. ಪ್ರೀತಿ ಮತ್ತು ಹರ್ಷದ ಸ್ಪರ್ಶದಿಂದ ಸಣ್ಣ ಸಣ್ಣ ಸಂಗತಿಗಳೂ ಮಹತ್ತರವಾಗಿ ಪರಿವರ್ತಿತವಾಗುತ್ತವೆ. ಒಂದು ಸೃಜನಾತ್ಮಕ ಕೆಲಸ ಜಗತ್ತಿನ ಸೌಂದರ್ಯವನ್ನ ವೃದ್ಧಿಸುತ್ತದೆ ಈ ಜಗತ್ತಿನಿಂದ ಅದು ಏನನ್ನೂ ಪಡೆದುಕೊಳ್ಳುವುದಿಲ್ಲ. ಆದರೆ ವಿಧ್ವಂಸಕ ಕೃತ್ಯವೊಂದು ಈ ಜಗತ್ತಿನಿಂದ ಹಲವು ಸಂಗತಿಗಳನ್ನ ಇಲ್ಲವಾಗಿಸುತ್ತದೆ. ನೀವು ಹಣ ವರ್ಚಸ್ಸುಗಳ ಬಗೆಗೆ ಎಚ್ಚರಿಕೆಯಿಂದ ಇರುವುದಾದರೆ ನೀವೊಬ್ಬ ಸೃಜನಶೀಲ ವ್ಯಕ್ತಿಯಾಗಬಹುದು. ಆದರೆ ಸೃಜನಶೀಲತೆ ನಿಮಗೆ ಅಧಿಕಾರ, ಹಣ, ವರ್ಚಸ್ಸುಗಳನ್ನ ನೀಡುತ್ತದೆ ಎನ್ನುವುದನ್ನ ಕುರಿತು ನಿಮಗೆ ಯಾವುದೇ ಗುಲಾಬಿ ತೋಟದ ಭರವಸೆ ನೀಡಲಾರೆ, ಆದರೆ ನಿಮ್ಮೊಳಗಿನ ಸಂತೋಷ ಹರ್ಷಗಳಲ್ಲಿ ನೀವು ಜಗತ್ತಿನ ಅತ್ಯಂತ ಶ್ರೀಮಂತ ವ್ಯಕ್ತಿಯಾಗುತ್ತೀರಿ, ಅಂತರಾಳದೊಳಗೆ ನೀವು ಸಂತೋಷ ಸಂಭ್ರಮಗಳಲ್ಲಿ ಮುಳುಗಿರುತ್ತೀರಿ ನಿಮ್ಮ ಬದುಕು ದೈವದ ಬದುಕಾದೀತು.

OO

## ಅನಾವರಣ

ನಲ್ಮೆ,

ನೀನು ಎ. ಎನ್. ಮೂರ್ತಿರಾಯರ "ದೇವರು" ಪುಸ್ತಕವನ್ನು ನಿನ್ನ ಅನಿಸಿಕೆಗಳನ್ನು ಬರೆ ಎಂದು ಕಳಿಸಿಕೊಟ್ಟು ಬಹಳ ದಿನಗಳಾದವು...ನಾನು ದೇವರ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಂಡವನಲ್ಲವಾದ್ದರಿಂದ ಯಾವ ಚಿಂತನೆಗೂ ತಕ್ಷಣದ ಶಬ್ದರೂಪ ಸಿಕ್ಕಲಿಲ್ಲ. 'ದೇವರ ಬಗ್ಗೆ ಚಿಂತಿಸದಿರುವುದು ಯಾವ ಪ್ರಜ್ಞಾವಂತನಿಗೂ ಸಾಧ್ಯವಿಲ್ಲವಾದ್ದರಿಂದ, ಏನಾದರೂ ಬರೆಯದಿರುವುದೂ ಸಾಧ್ಯವಾಗಲಿಲ್ಲ. ಅಂತೂ ನನ್ನ ಅನಿಸಿಕೆಗಳನ್ನು ಹೀಗೆ ದಾಖಲಿಸುವ ಪ್ರಯತ್ನ ಮಾಡಿದ್ದೇನೆ.

ಕೆಲವು ತಿಂಗಳುಗಳ ಕೆಳಗೆ "ಮಿಥಿಕ್" ಒಂದರ ತರ್ಕಬದ್ಧತೆ ಕುರಿತು ಬಂದ ಬರಹವನ್ನು ನಾನು ಟೀಕಿಸಿದಾಗ, ನೀನು ಪ್ರತಿಭಟಿಸಿದ್ದೆ. "ವಿಮರ್ಶೆ ಆರೋಗ್ಯಕರವಾಗಿರಬೇಕು." ಎಂದು ಅಭಿಪ್ರಾಯಪಟ್ಟಿದ್ದೆ. ವಿಮರ್ಶೆ ಆರೋಗ್ಯಕರವಾಗಿರಲು ಅದಕ್ಕೆ ಪೂರಕವಾದ ಬರಹವೂ ಆರೋಗ್ಯಕರವಾಗಿರಬೇಕು, ಇಲ್ಲಿ ನೋಡು ಮೂರ್ತಿರಾಯರೂ ತಮ್ಮ "ಇಂಡಕ್ಟಿವ್ ಮೆಥೆಡ್"ನಲ್ಲಿ ದೇವರ ಸುತ್ತ ಬೆಳೆದು ನಿಂತ ಕತೆಗಳ ತರ್ಕಬದ್ಧತೆ ಪ್ರಶ್ನಿಸುತ್ತಾರೆ. ಆದರೆ ಅವರ ದರ್ಶನಾತ್ಮಕ ಪ್ರಯೋಜನವನ್ನು ಅವರು ಸಕಾರಣವಾಗಿಯೆ ಗುರುತಿಸುತ್ತಾರೆ. ಇದು ಆರೋಗ್ಯಕರ ಚಿಂತನೆಯ ಲಕ್ಷಣ. ದೇವರನ್ನು ತಮ್ಮ ಮಟ್ಟಕ್ಕೆ ಇಳಿಸಿದ ಜನ ಕಟ್ಟಿದ ಕತೆಗಳಲ್ಲಿ ತರ್ಕಬದ್ಧತೆ ಯಾವರೂ ಎಲ್ಲಿಂದ ಬರಬೇಕು ? ದೇವರು ಒಬ್ಬನೆ ಎಂಬ ಕಲ್ಪನೆ ಚಿಂತನಾತ್ಮಕ ಬೆಳವಣಿಗೆಗೆ ಅಗತ್ಯ. ಆದರೆ ಆತ "ಸಾಕ್ಷಿ"ಯೂ "ಕರ್ಮಾಧ್ಯಕ್ಷ"ನೂ ಆಗಲಾರ ಎಂಬ ಅವರ ಅನಿಸಿಕೆ ಒಪ್ಪಬಹುದು. ಆದರೆ ದೇವರ ಕುರಿತಾದ ಸರ್ವಾಂತರ್ಯಾಮಿ, ಸರ್ವಶಕ್ತ, ಸರ್ವಜ್ಞ ಎಂಬ ಮಹತ್ವದ ಆರೋಪಣೆ ಕುರಿತಾದ ಅವರ ನಿಲುವು, ನೀನು ಹೇಳಿದಂತೆ ಕೆಲಮಟ್ಟಿಗೆ ಅನಗತ್ಯದ ಜಿಜ್ಞಾಸೆಯೆ. ಏಕೆಂದರೆ ಈ ಆರೋಪಣೆ, ದೈವತ್ವ ನಮ್ಮನ್ನು ಮೀರಿದ್ದು ಎಂಬ ನೆಲಗಟ್ಟಿನಿಂದ ಬಂದದ್ದು.

ಚಿಂತನೆಯ ಸಂಕೀರ್ಣ ಘಟ್ಟದಲ್ಲಿ ಮೂರ್ತಿರಾಯರು "ದೇವರಿಲ್ಲ" ಅಥವಾ "ದೇವರಿದ್ದಾನೆ ಎಂದು ನಂಬುವುದಕ್ಕೆ ಬೇಕಾದ ಸಾಕ್ಷಿ ಸಿಕ್ಕಿಲ್ಲ" ಎಂಬ ನಿಲುವಿಗೆ ಬರುತ್ತಾರೆ. ಅವರೇ ಹೇಳುವಂತೆ ನಾನು "ದೇವರು ಇಲ್ಲ" ಎಂದುಕೊಳ್ಳುವಾಗ ನನ್ನ ಮನಸ್ಸಿನಲ್ಲಿರುವುದು ಸಂತೋಷವಲ್ಲ, ಹೆಮ್ಮೆಯಲ್ಲ. ನಂಬುವವರನ್ನು ಹೀಯಾಳಿಸ

ಬೇಕು ಎಂಬ ಅಪೇಕ್ಷೆಯಂತೂ ಖಂಡಿತ ಅಲ್ಲ. "ದೇವರು ಇಲ್ಲವಲ್ಲ" ಎಂಬ ಅದನ್ನು "ವಿಷಾದ" ಎಂದೇ ಕರೆಯಬಹುದೇನೊ" ಈ ಚಿಂತನೆಯ ತರ್ಕಬದ್ಧತೆ ಹೇಗೆ. ನಮಗೆ ಬೇಕಿರುವ ದೇವರು "ಸಾಕ್ಷಿದೇವರೂ ಸುಖದುಃಖಗಳನ್ನು ಲೀಲೆಯಾಗಿಸಿಕೊಂಡ ದೇವರೂ ಅಲ್ಲ, ನಮಗೆ ಬೇಕಿರುವುದು ಮೌಲ್ಯರಕ್ಷಕನಾದ ಕರುಣಾರ್ದ್ರ ಹೃದಯನಾದ ಪ್ರೇಮಸ್ವರೂಪ, ಇಂಥವನು ಇದ್ದಾನೆ ಎಂಬುದನ್ನು ಸ್ಥಾಪಿಸಲು ಸಾಧ್ಯವಾಗಿಲ್ಲ. ಏಕೆಂದರೆ ಇಂತಹ ಪ್ರೇಮಸ್ವರೂಪನಾದ ದೇವರಿದ್ದರೆ, ಕೇಡು ಸಂಕಟಗಳಿರುತ್ತಿರಲಿಲ್ಲ.

ನಾವು ಯಾವಾಗಲೂ ದೃಢವಾಗಿ ನಂಬಿದ್ದೆವಲ್ಲ. "ದೇವರಿಲ್ಲದಿದ್ದರೆ ಅವನನ್ನು ನಿರ್ಮಿಸಿಕೊಳ್ಳಬೇಕು" ಎಂಬ ಅಂಶವನ್ನು ಮೂರ್ತಿರಾಯರು ಎಷ್ಟು ಚೆನ್ನಾಗಿ ಪರಿಶೀಲಿಸಿದ್ದಾರೆ, ಹೌದಲ್ಲವೆ ನಾವು ಮೌಲ್ಯಗಳನ್ನೇ ದೇವರು ಎನ್ನುವುದಾದರೆ, ಅವನ್ನು ಮೌಲ್ಯಗಳೆಂದೆ ಕರೆಯಬಹುದಲ್ಲ. ಏಕೆಂದರೆ ದೇವರು ಎಂದ ಒಡನೆ ಅದರ ಬೆನ್ನು ಹತ್ತುವ ಕಲ್ಪನೆಗಳನ್ನು, ಇವನು ಅಂತಹ ದೇವರಲ್ಲ "ನಮ್ಮ ದೇವರು" ಎಂಬ ಅಹಂ ಎಲ್ಲವೂ ಸಹಜವಾಗಿ ಬಂದು ಬಿಡುತ್ತದೆ.

ಆದರೆ ನಮ್ಮ ಪರಂಪರೆಯಲ್ಲಿನ "ದೇವರ" ಕುರಿತ ಚಿಂತನೆಯಲ್ಲಿನ ಎಲ್ಲಾ ಅಂಶಗಳನ್ನು ಮೂರ್ತಿರಾಯರು ಸಾರಾಸಗಟಾಗಿ ತಿರಸ್ಕರಿಸುವುದಿಲ್ಲ, ಇದಕ್ಕೆ ಅವರು "ಬ್ರಹ್ಮ"ದ ಕುರಿತು ಮಾಡಿರುವ ವ್ಯಾಖ್ಯಾನವೆ ಸಾಕ್ಷಿ..." ಈ ವಿಶ್ವವೆಲ್ಲ ಬ್ರಹ್ಮ ಎಂಬ ಮೂಲವಸ್ತುವಿನ ವಿಕಾಸ, ಬ್ರಹ್ಮವಲ್ಲದ್ದು ಏನೂ ಇಲ್ಲ. ಆ ಬ್ರಹ್ಮವೆ ಸತ್ಯ, ಬ್ರಹ್ಮದ ವಿಕಾಸ ಅರಿವಿಲ್ಲದೆ ಉದ್ದೇಶವಿಲ್ಲದೆ ನಡೆದಿದೆ. ಅದರ ಒಂದು ಅಂಶವಾದ ಮಾನವನಲ್ಲಿ ಅದು ಉದ್ದೇಶಪೂರ್ವಕವಾಗಿ ನಡೆದೆ. ಅಲ್ಲಿಗೆ ಒಳಿತು ಕೆಡುಕುಗಳೆರಡು ಬ್ರಹ್ಮ ಅವೆರಡರ ಸಂಘರ್ಷವೂ ನಿರಂತರವೆ, ಕೇಡನ್ನು ನಿವಾರಿಸುವ ಕೆಲಸ ಉದ್ದೇಶಪೂರ್ವಕವಾಗಿಯೆ ಆಗಬೇಕು. ಬ್ರಹ್ಮದ ವಿಕಾಸ ಮುಗಿಯುವುದಿಲ್ಲ ಅದೆಂದಿಗೂ ಪರಿಪೂರ್ಣವಾಗುವುದಿಲ್ಲ. ಬೆಳೆಯುತ್ತಲೆ ಇರುತ್ತದೆ"—ಇದಕ್ಕೆ ಟಿಪ್ಪಣಿ ಬೇಕಿಲ್ಲ ಅಲ್ಲವೆ ?

ಅವರು ದೇವರನ್ನು ನಂಬದಿದ್ದರೆ ಬೇಡ, ದೈವಶ್ರದ್ಧೆಯನ್ನು ಅವರೇಕೆ ಕೆಣಕಬೇಕು ಅಂದಿದ್ದಿ. ನೀನು ಅವರು ಬರೆದಿರುವ ದೈವಶ್ರದ್ಧೆಯಿಂದಾದ ದುರಂತಗಳನ್ನು ಗಮನವಿಟ್ಟು ಓದಿಲ್ಲ ಎನ್ನಿಸುತ್ತದೆ. ಧರ್ಮಯುದ್ಧಕ್ಕೆ ಹೊರಟು ಘೋರ ಸಂಕಟಗಳಿಗೆ ಸಿಕ್ಕಿ ಹಾಕಿಕೊಂಡ ಮಕ್ಕಳ ಕ್ರುಸೇಡುಗಳು ಗರ್ಭಿಣಿಯನ್ನು ದೈವನಂಬಿಕೆಯಿಂದ ಸಾಯಲುಬಿಟ್ಟ ನಂಬಿಕೆ ಗುಂಪಿನವರು, ಧಾರ್ಮಿಕ ತತ್ವ ನಂಬಿ ಹಸು ಕಂದನನ್ನೇ ಸಾವಿಗೆ ದೂಡಿದ ಕ್ರೈಸ್ತ ದಂಪತಿಗಳು....ಇವರ ಶ್ರದ್ಧೆಯನ್ನು ಹೇಗೆ ಸಮರ್ಥಿಸಲು ಸಾಧ್ಯ ? ಅಷ್ಟು ದೂರ ಏಕೆ ಹೋಗಬೇಕು, ಈ ರಾಜಕಾರಣಿಗಳು ದೇವರನ್ನು ಹೇಗೆ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ ಎನ್ನುವುದಕ್ಕೆ ನಮ್ಮ ಸುತ್ತಲಿನ ಘಟನೆಗಳೆ ಸಾಲದೆ ?

ದೇವರ ಕುರಿತಾದ ನಮ್ಮ ನಿಲುವಿಗೆ "ನೀತಿ" ಕುರಿತಾದ ಚಿಂತನೆಯೂ ಅಗತ್ಯ.

ಏಕೆಂದರೆ ನೈತಿಕ ಹಿನ್ನೆಲೆಯನ್ನೆ ತಾನೆ ನಾವು ಪ್ರತಿಪಾದಿಸುವುದು, ಆದರೆ "ನೀತಿ" ವಿಚಾರಾತ್ಮಕವಾದದ್ದು "ಪ್ರೇಮ" ಭಾವನಾತ್ಮಕವಾದದ್ದು. ಅತ್ಯುನ್ನತ ಮಟ್ಟದಲ್ಲಿ ಇವೆರಡೂ ಒಂದೇ. ಮೂರ್ತಿರಾಯರು "ಪ್ರೇಮ" ಎಂಬ ಪದವನ್ನು ಬಳಸುತ್ತಾರೆ. ಇಂತಹ ಪ್ರೇಮವೆ ಆನಂದ, ಲೋಕ ಸೇವೆ ಕುರಿತಾದ ಶ್ರದ್ಧೆಯೆ ಮುಕ್ತಿ. ನಮ್ಮೆಬ್ಬರ ಅಭ್ಯುದಯವನ್ನು ಒತ್ತಟ್ಟಿಗಿಟ್ಟು ಜೀವಕೋಟಿ ಅಭ್ಯುದಯಕ್ಕೆ ದುಡಿವ ಮೂಲಕ ಸ್ವಾರ್ಥದಿಂದ ಪಡೆವ ಬಿಡುಗಡೆಯೆ ಮುಕ್ತಿ....ಈ ಹಿನ್ನೆಲೆಯಲ್ಲಿ ನಮಗೆ ಬೇಕಿರುವ ದೇವರು, ಮಾನವ ಮತದ ಹಿನ್ನೆಲೆಯು ತತ್ವಗಳಾದ ಸರ್ವಸಮತಾಭಾವ, ನ್ಯಾಯ, ನೀತಿ—ಒಟ್ಟಿನಲ್ಲಿ 'ಪ್ರೇಮ', ನಮಗೆ ಬೇಕಾದ ದೇವರು ಮೌಲ್ಯ ರಕ್ಷಕ, ಎಲ್ಲರ ಯೋಗ ಕ್ಷೇಮವನ್ನು ಪಕ್ಷಪಾತವಿಲ್ಲದೆ ನೋಡಿಕೊಳ್ಳುವನು. ಪ್ರೇಮಮೂರ್ತಿ....ಮೂರ್ತಿ ರಾಯರು ಪ್ರತಿಪಾದಿಸುವ ಈ ಉದಾತ್ತ ಗುಣ ಚಿಂತನೆಯ ನೆಲೆಯಾದ ದೇವರು ಎಷ್ಟು ಪ್ರಸ್ತುತ ಅಲ್ಲವೆ ?

ನನಗೇನೂ ಈ ಪುಸ್ತಕ ಓದಿದ ಮೇಲೆ "ದೇವರಿದ್ದಾನೊ" "ಇಲ್ಲವೊ" ಎಂಬ ಚರ್ಚೆಯೆ ಅಪ್ರಸ್ತುತವಾಗಿ ಕಾಣುತ್ತಿದೆ. ನಿನಗೇನನ್ನಿಸಿತು ತಪ್ಪದೆ ತಿಳಿಸುತ್ತಿ ತಾನೆ ? ಹ್ಣ ! ಅದನ್ನೂ ದೇವರಿಗೆ ಬಿಟ್ಟುಬೇಡ.

ಮುಂದಿನ ಪತ್ರದಲ್ಲಿ ಹೊಸ ಪುಸ್ತಕದೊಂದಿಗೆ ಭೇಟಿಯಾಗೋಣ.

ಇಂತಿ ಆತ್ಮೀಯತೆಯಿಂದ
**ಶ್ರೀಧರ**

---

ಹಣವೆಂದರೆ ಜನರಿಂದ ಕೆಲಸ ಮಾಡಿಸುವ ಶಕ್ತಿ ಎಂದು ನಾವು ಭಾವಿಸಿದರೆ ಅಂಥವರು ಎಷ್ಟೆಷ್ಟು ಚತುರರೋ ಅಷ್ಟೇ ಪ್ರಮಾಣದಲ್ಲಿ ಸಂಪತ್ತು ಬೆಳೆದೀತು, ಹೀಗೆ ವಿಚಾರ ಮಾಡಿದರೆ ನಿಜವಾದ ಸಂಪತ್ತು ಮನುಷ್ಯನೇ ಎಂಬುದು ಅರಿವಾದೀತು, ಭೂಮಿಯ ಬಸಿರು ಬಗೆದು ಧನ ಹುಡುಕಬೇಕಿಲ್ಲ, ಮನುಷ್ಯನ ಹೃದಯದಲ್ಲಿ ಅದನ್ನು ಶೋಧಿಸಬೇಕು.

—ಗಾಂಧೀಜಿ

---

## ಮುಗಿಸುವ ಮುನ್ನ

**ನೂರೊಂದು ಕನಸುಗಳ ಹರಿಕಾರ, ಕ್ರಿಯಾಶೀಲ ಶಂಕರ್ :**

1978ರಲ್ಲಿ ಕಾರ್ನಾಡರ 'ಒಂದಾನೊಂದು ಕಾಲದಲ್ಲಿ' ಚಿತ್ರದಲ್ಲಿನ 'ಗಂಡುಗಲಿ' ಪಾತ್ರಕ್ಕೆ ಅತ್ಯುತ್ತಮ ನಟ ಪ್ರಶಸ್ತಿ ಪಡೆದ ಶಂಕರ್ ಮತ್ತೆ ಹಿಂತಿರುಗಿ ನೋಡಲಿಲ್ಲ. ಇಂದಿಗೂ ಆ ಚಿತ್ರದಲ್ಲಿ ಚಕ್ಕನೆ ನೆನಪಿಗೆಬರುವುದು ಗಂಡುಗಲಿಯ ಗಂಡು ಧ್ವನಿ, ನೇರ ಓಟ. ಅತ್ಯಂತ ಕ್ರಿಯಾಶೀಲ, ತನ್ನ ಮನಸ್ಸನ್ನು ಹೊಸ ವಿಚಾರಗಳಿಗೆ ತೆರೆದುಕೊಳ್ಳುತ್ತಿದ್ದ ಶಂಕರ್, ತನ್ನೊಟ್ಟಿಗಿನವರ ಕಷ್ಟ, ನಷ್ಟ, ನೋವು, ಪ್ರೀತಿಗೆ ಸದಾ ಸ್ಪಂದಿಸುತ್ತಿದ್ದ. ಬಿಡುವಾಗಿರುವುದನ್ನು ದ್ವೇಷಿಸುತ್ತಿದ್ದ ಶಂಕರ್‌ಗೆ ಇಷ್ಟವಾಗಿದ್ದ ಮಾತು. ನಾಟಕಕಾರ ಯೂಜೀನ್ ಅಯನೆಸ್ಕೋ ಹೇಳಿದ್ದು—'ಸದಾ ಏನನ್ನಾದರೂ ಮಾಡುತ್ತಿರು, ಸತ್ತಮೇಲೆ ಮಲಗುವುದು ಇದ್ದೇ ಇದೆ.' ತನ್ನ ಮಹತ್ವಾಕಾಂಕ್ಷೆಯ ಚಿತ್ರ 'ಸಂಗ್ಯಾ-ಬಾಳ್ಯಾ'ಕ್ಕೆ ಸಿದ್ಧತೆ ನಡೆಸುತ್ತಿರುವಾಗಲೇ ದುರಂತದಿಂದ ಇಲ್ಲಿಂದ ನಿರ್ಗಮಿಸಿದ. ಶಂಕರನ ಕನಸುಗಳು ನನಸಾಗುವುದು. ನಮ್ಮಲ್ಲಿನ ಕ್ರಿಯಾಶೀಲ ಮನಸ್ಸುಗಳು ಶಂಕರನ ಕನಸಿಗೆ ಸ್ಪಂದಿಸುವುದಾದರೆ, ಸ್ಪಂದಿಸಿದಾಗ ಮಾತ್ರ ಸಾಧ್ಯ.

ಮರೆತಿದ್ದು : ನವೆಂಬರ್ 9, ಶಂಕರನ ಹುಟ್ಟುಹಬ್ಬ.

**ಒಂದು ಕೋಗಿಲೆಯ ಕಥೆ :**

ಸೆಪ್ಟೆಂಬರ್ 28, 1992ಕ್ಕೆ ಲತಾ ತನ್ನ ಸಂಗೀತಸಾಗರ ಯಾನದ 50 ವರ್ಷ ಮುಗಿಸಿದಳು. 1943ರ ಸಂಜೆ, ಕೊಲ್ಲಾಪುರದ ಪ್ಯಾಲೇಸ್ ಥಿಯೇಟರ್‌ನಲ್ಲಿ 13 ವರ್ಷದ ಲತಾ, ತನ್ನ ತಂದೆ ಮರಾಠಿ ರಂಗಭೂಮಿಯ ನಟ/ಗಾಯಕ ದೀನಾನಾಥ್ ಮಂಗೇಷ್ಕರ್‌ಗೆ ತರ್ಪಣವೆಂದು ಹಾಡು ಹೇಳಿದಾಗ, ಲತಾ ಎಂಬ ಯಶೋಗಾಥೆ ಮೊದಲುಗೊಂಡಿತು. ಅದು ಕ್ರಾಂತಿ ಮೈದಾನವೇ ಆಗಲಿ, ಇಂಗ್ಲೆಂಡಿನ ರಾಯಲ್ ಆಲ್ಬರ್ಟ್ ಹಾಲ್ ಆಗಲಿ, ಆ ಸ್ವರದ ಮೋಡಿಗೊಳಗಾಗದವರು ವಿರಳ. ಸಾವಿರಾರು ಹಾಡಿನ ರಾಣಿ, ತನ್ನ ಅಭೂತಪೂರ್ವ ಸಾಧನೆಯಿಂದ ಗಿನ್ನೆಸ್ ಪುಸ್ತಕದಲ್ಲಿ ದಾಖಲಾದಳು. ಆಕೆ ನಿಜವಾದ ಅರ್ಥದಲ್ಲಿ ಭಾರತದ ಏಕತೆಯ ಸಂಕೇತ, ಭಾರತದ ಜನಜೀವನದ ಬಿಡಿಸಲಾಗದ ಒಂದು ಭಾಗ. ಕವಿ ನಿರ್ದೇಶಕ ಗುಲ್ಜಾರ್ ಹೇಳಿದ ಮಾತು., ಆಕೆಯ ಸಾರ್ಥಕ ಬಾಳಿಗೊಂದು ಹೂಗುಚ್ಛ—"ಆಕೆಯ ಧ್ವನಿಯನ್ನು ನಾವು ಕೇಳದೆ ದಿನಗಳೇ ಇಲ್ಲ, ನಾವು ಕಿವುಡರಾಗಿರದಿದ್ದಲ್ಲಿ." ಈ ಕೋಗಿಲೆ ಹಾಡುತ್ತಲೇ ಇರಲಿ. ಈ ನಿರಾಶಾದಾಯಕ, ಬಲುಭಾರ, ಬೇಸರ, ಜಂಜಡ ತುಂಬಿದ ಬದುಕಿನಲ್ಲಿ, ಸಂತೋಷ ತುಂಬಲು ಶಾಶ್ವತವಾಗಿ.

**ಅರಿಹೋದ ದೀಪಕ್ಕೊಂದು ಶ್ರದ್ಧಾಂಜಲಿ :**

ಸೆಪ್ಟೆಂಬರ್ 28, 1991ರಂದು ಬಾಡಿಗೆ ಕೊಲೆಗಡುಕನೊಬ್ಬನ ಗುಂಡು ಶ್ರದ್ಧಾವಂತ ಕಾರ್ಮಿಕ ನಾಯಕನೊಬ್ಬನ ಬದುಕಿಗೆ ಕೊನೆ ಹಾಡಿತು. ನಿಯೋಗಿ, ದೇಶ ಕಂಡ ಅಪರೂಪದ ಕಾರ್ಮಿಕ ನಾಯಕರಲ್ಲೊಬ್ಬ. ಹುಟ್ಟಿದೂರು ಬಂಗಾಳ ದಿಂದ ವಲಸೆ ಬಂದ ನಿಯೋಗಿ ಭಿಲ್ಲಾಯ್ ಉಕ್ಕಿನಘಟಕದಲ್ಲಿ ಕೆಲಸ ಮಾಡುತ್ತಲೇ ಪದವಿ ಮುಗಿಸಿದ. ಕಾರ್ಮಿಕ ಸಂಘಟನೆಯಲ್ಲಿ ತೊಡಗಿದ್ದರಿಂದ ಕೆಲಸದಿಂದ ಬರ್ತಫ್. ಧನಿತೋಲಾದ ಗಣಿಯಲ್ಲಿ ಕೆಲಸ, ಸಹೋದ್ಯೋಗಿ ಆಶಾಳೊಡನೆ ಮದುವೆ. ಚತ್ತೀಸ್‌ಘರ್ ಮುಕ್ತಿ ಮೋರ್ಚಾದ ರಚನೆ. ಆತ ನಡೆಯುತ್ತಿದ್ದ ದಾರಿ ನೇರ ಬಂದೂಕಿನ ಎದುರಿಗೆ ಹೋಗುವಂತದ್ದಾಗಿತ್ತು. ಕೊನೆಗೆ ಆತನ ಬದುಕು ಶರಣಾಗಿದ್ದು, ಬಂದೂಕಿನ ಗುಂಡಿಗೆ.

ಒಬ್ಬ ಕ್ರಿಯಾಶೀಲ, ಪರ್ಯಾಯಚಿಂತಕನಾಗಿದ್ದ ಶಂಕರ ಗುಹಾನಿಯೋಗಿ, ನಮ್ಮ ಅಭಿವೃದ್ಧಿಯ ಮೂಲಕಲ್ಪನೆಗಳನ್ನೇ ಪ್ರಶ್ನಿಸುತ್ತಿದ್ದ ಛಾತಿವಂತ. ಬದಲಾಗುತ್ತಿರುವ ಇಂದಿನ ಆರ್ಥಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಯಲ್ಲಿ ನಿಯೋಗಿಯ ಅಗತ್ಯ ತುಂಬಾ ಇತ್ತು.

**ಮೃತ್ಯುಂಜಯನಾಗದ ಮನ್ಸೂರ್ :**

ಕರಿಕೋಟು, ಕಚ್ಚೆ ಪಂಚೆ ಹಾಕಿದ ತೆಳುಕಾಯದ ಮನ್ಸೂರರ ಶರೀರ, ಇನ್ನು ಮುಂದೆ ಧಾರವಾಡದ ರಸ್ತೆಗಳಲ್ಲಿ ಬೀಡುಬೀಸಾಗಿ ನಡೆಯುವುದು ಕಾಣಿಸುವುದಿಲ್ಲ.

ಶಬ್ದಬ್ರಹ್ಮ ಬೇಂದ್ರೆಯನ್ನು ಮರಳುಗೊಳಿಸಿ "ಮನಸೂರೆ ಹೋಯಿತೋ, ಕಳಚಿ ಬಿದ್ದಿತ್ತು ಗೆಳೆಯ, ಜಗದ ಸಂತೆಯ ಚಿಂತೆ" ಎಂದು ಉದ್ಗರಿಸುವಂತೆ ಮಾಡಿದ್ದ ಈ ನಾದಯೋಗಿಯ ಸ್ವರ ಇನ್ನು ಮುಂದೆ ಅವರ ಮನೆ 'ಮೃತ್ಯುಂಜಯ'ದಿಂದ ಹೊಮ್ಮಿ ದಾರಿಗರನ್ನು ಪರವಶಗೊಳಿಸುವುದಿಲ್ಲ. ಮೊದಲು ನೀಲಕಂಠಬುವಾ, ನಂತರ ಅಲ್ಲಾದಿಯಾಖಾನರ ಮಗ ಮಂಜೀಖಾನರಲ್ಲಿ ಹನ್ನೊಂದು ವರ್ಷಗಳ ಕಠಿಣ ಸಾಧನೆಯಿಂದ ಮುಪ್ಪರಿಗೊಂಡ ಕಂಠದ, ಜೈಪುರ್–ಅತ್ರೌಲಿ ಘರಾನಾದ ದಿಗ್ಗಜ, ಮನ್ಸೂರ್ ಇನ್ನಿಲ್ಲ. ಸಾವಿರಾರು ಸಂಗೀತ ಪ್ರೇಮಿಗಳ ಈ 'ಅಣ್ಣಾ'ನ ಸ್ವರ, ನಾದದ ಝೇಂಕಾರ ರಸಿಕರಿರುವವರೆಗೂ ಝೇಂಕರಿಸುತ್ತಲೇ ಇರುತ್ತದೆ. ಅದಕ್ಕೆ ಸಾವಿಲ್ಲ.

**ಹೃದಯಹೀನ ಸರ್ಕಾರ :**

ಪ್ರಗತಿಪರ ವಕೀಲ ಕಂಚನಹಳ್ಳಿ ಗಂಗಾಧರಮೂರ್ತಿಯ ಕಗ್ಗೊಲೆ— ನಮ್ಮ ಸಾಮಾಜಿಕ ಪ್ರಜ್ಞೆಯ ಮೇಲೆ ಬಿದ್ದ ಕಪ್ಪುಗುರುತು. ಮೂರ್ತಿ ಪ್ರತಿನಿಧಿಸುತ್ತಿದ್ದ ಆದರ್ಶ, ಒಬ್ಬಂಟಿಯಾಗಿ ದುಷ್ಟಕೂಟದ ವಿರುದ್ಧ ಹೋರಾಡುತ್ತಿದ್ದ ಆತನ ಛಾತಿ– ಶ್ಲಾಘನೀಯ. ನಮ್ಮ ನಗರೀಕೃತ ಗ್ರಾಹಕವಾದ, ಎರವಲು ತಂದ ಆರ್ಥಿಕ ಧೋರಣೆ/

ಯೋಜನೆ/ಯೋಚನೆಗಳು, ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅಂತರ್ಗತವಾದ ಹಿಂಸೆ, ಅಸಂಸ್ಕೃತಿ ಮನುಷ್ಯನಲ್ಲಿ ತುಂಬುವ ದರ್ಪ, ಅಹಂಕಾರ—ಇವೆಲ್ಲಾ ಒಟ್ಟುಗೂಡಿ ಮೂರ್ತಿಯ ಕೊಲೆ ಮಾಡಿದವು. ನಾಗಮಂಗಲ, ಸುತ್ತಮುತ್ತಲಿನ ಹಳ್ಳಿಯ ಜನ ತಮ್ಮ ಆಪತ್ತಿಗೆ ಆಗುತ್ತಿದ್ದ ಬಂಧುವನ್ನು ಕಳೆದುಕೊಂಡು ದಿಗ್ಭ್ರಾಂತ, ಅನಾಥ ರಾಗಿದ್ದಾರೆ. ನಾಮಕಾವಾಸ್ತೆ COD ತನಿಖೆ ನಡೆಯುತ್ತಿದೆ. ಈ ಪ್ರಕರಣ ಕುಣಿಗಲ್‌ನ ಗಂಗಯ್ಯನ ಕೊಲೆಯ ತನಿಖೆಯ ದಾರಿ ಹಿಡಿಯುವ ಎಲ್ಲ ಲಕ್ಷಣಗಳೂ ಕಾಣಿಸುತ್ತಿವೆ. ಕರ್ನಾಟಕದ ಭ್ರಷ್ಟ, ಹೃದಯಹೀನ ರಾಜಕೀಯ ವ್ಯವಸ್ಥೆಯಲ್ಲಿ ನ್ಯಾಯ ಮರೀಚಿಕೆಯಾಗುವ ಸಂಭವವೇ ಹೆಚ್ಚಾಗಿದೆ.

**ಹಸಿರು ಹೋರಾಟದಲ್ಲೊಂದು ಅವಘಡ :**

ಜರ್ಮನಿಯ 'ಹಸಿರು ಪಕ್ಷ'ದ ಸಂಸ್ಥಾಪಕಿ ಪೆಟ್ರಾಕೆಲ್ಲಿ ; ಆಕೆಯ ಸಂಗಾತಿ ಗೆರ್ಟ್‌ಬಾಸ್ಟಿಯನ್ ಮೊನ್ನೆ (19–10–92) ಬಾನ್‌ನ ತಮ್ಮ ಮನೆಯಲ್ಲಿ ಸಂಶಯಾಸ್ಪದ ರೀತಿಯಲ್ಲಿ ಸತ್ತುಬಿದ್ದಿದ್ದರು.

'ಹಸಿರು ಪಕ್ಷ'ದ ಮೂವರು ಸಂಸ್ಥಾಪಕರಲ್ಲಿ ಒಬ್ಬಳಾದ ಕೆಲ್ಲಿ, ಶಾಂತಿ ಮತ್ತು ಪರಿಸರ ಕ್ಷೇತ್ರದಲ್ಲಿ ದುಡಿಯುತ್ತಿದ್ದ ಎಲ್ಲರನ್ನು ಕೂಡಿಸಿ, ಗಮನಾರ್ಹ ಶಕ್ತಿಯಾಗುವಂತೆ ಮಾಡಿ, NATOದ ಪರಮಾಣು ಯೋಜನಾ ತಂಡದ ಸದಸ್ಯನಾಗಿದ್ದ ಬಾಸ್ಟಿಯನ್ ಹಸಿರು ಪಕ್ಷಕ್ಕೆ ಬರುವಂತೆ ಮಾಡಿದಳು. ಮಾನವ ಹಕ್ಕುಗಳ ರಕ್ಷಣೆಯಲ್ಲೂ ಆಸಕ್ತಿ ಇದ್ದ ಕೆಲ್ಲಿ, ಟಿಬೇಟ್‌ನಲ್ಲಿ ಚೀನಾದ ಹಸ್ತಕ್ಷೇಪವನ್ನು ವಿರೋಧಿಸಿದ್ದಳು.

ಮಹಾತ್ಮಾ ಗಾಂಧಿಯಿಂದ ಸ್ಫೂರ್ತಿ ಪಡೆದಿದ್ದ ಪೆಟ್ರಾ ಅನೇಕ ಬಾರಿ ಭಾರತಕ್ಕೆ ಬಂದಿದ್ದಳು. ಆಕೆಯಿಲ್ಲದೆ ಹಸಿರು ಚಳುವಳಿ ಕ್ಷೀಣವಾಗಿದೆ. ಆದರೆ ಆಕೆಯ ಚಳುವಳಿಯ ಬೇರೆ ಮೊಳಕೆಗಳಾದ ಸುಂದರ್‌ಲಾಲ್ ಬಹುಗುಣ, ಮೇಧಾ ಪಾಟ್ಕರ್, ಗ್ರೀನ್‌ಪೀಸ್, ಸಬ್ಬಾತ್ ಅಲವ್‌ಗಳ ಮೂಲಕ ಆಕೆ ಬದುಕಿಯೇ ಇರುತ್ತಾಳೆ, ಅದು ಸತ್ಯ.

**ಬಲವಂತವಾಗಿ ನಂದಿಸಲ್ಪಟ್ಟ ಕಪ್ಪುದೀಪ :**

ಅಕ್ಟೋಬರ್ 18, 1985ರಂದು ಆಫ್ರಿಕಾದ ಬಿಳಿಯರ ಪ್ರಭುತ್ವ, ಯುವ ಕವಿ ಬೆಂಜಮಿನ್ ಮೊಲಾಯಿಸ್‌ನನ್ನು ವರ್ಣಭೇದ ನೀತಿಯನ್ನು ವಿರೋಧಿಸಿದ್ದಕ್ಕಾಗಿ ಗಲ್ಲಿಗೇರಿಸಿತು.

ಅಧ್ಯಕ್ಷ ಡಿಕ್ಲರ್ಕ್ ಪಶ್ಚಿಮ ರಾಷ್ಟ್ರಗಳ ಒತ್ತಡದಿಂದ ಸುಧಾರಣೆಗಳನ್ನು ಘೋಷಿಸಿದ್ದರೂ, ಕರಿಯರ ಜೀವನ ಹೀನವಾಗೇ ಇದೆ. ಕರಿಯರ/ಬಿಳಿಯರ ನಡುವಿನ ಹಿಂಸೆಯಿಂದ, ಬಡತನ ಹಸಿವು ಕ್ಷಾಮದಿಂದ ಆಫ್ರಿಕಾ ತತ್ತರಿಸುತ್ತಿದೆ.

ಆಲ್ಲಿನ ವಜ್ರ, ಕಲ್ಲಿದ್ದಲು, ಬಂಗಾರ—ಎಲ್ಲವನ್ನೂ ದೋಚದ ಪಶ್ಚಿಮ ರಾಷ್ಟ್ರಗಳು ಆಫ್ರಿಕಾವನ್ನು ದಾರಿದ್ರ್ಯದ ಬೀಡಾಗಿಸಿವೆ. ಮೊಲಾಯಿಸ್‌ನ ಕಪ್ಪು ಕಾವ್ಯಕ್ಕೆ ಅವನ ಕೆಂಪು ರಕ್ತ ತರ್ಪಣವಾಯ್ತು. ಅವನ ತ್ಯಾಗ ವ್ಯರ್ಥವಾಗದಿರಲಿ.

**ಬೇಡವಾಗಿದ್ದ ಉಸಾಬರಿ :**

ಗಿರೀಶ್ ಕಾರ್ನಾಡ್, ಕನ್ನಡ ರಂಗಭೂಮಿಗೆ ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ತಂದುಕೊಟ್ಟ ಧೀಮಂತರಲ್ಲೊಬ್ಬರು. 1991–92ನೇ ಸಾಲಿನ ಕರ್ನಾಟಕ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನು, ತಮ್ಮ ನಾಟಕ 'ತಲೆದಂಡ'ಕ್ಕೆ ಸ್ವೀಕರಿಸಲು ಬಂದಾಗ, ರಂಗ ಕಲಾವಿದರು ಅವರು ಇಂಗ್ಲೀಷ್ ಪಾಕ್ಷಿಕವೊಂದಕ್ಕೆ ನೀಡಿದ್ದ ಸಂದರ್ಶನವೊಂದರಲ್ಲಿ ಹೇಳಿದ ಮಾತುಗಳನ್ನು ಪ್ರತಿಭಟಿಸಿ, ಘೇರಾವ್ ನಡೆಸಿ, ಧಿಕ್ಕಾರ ಹಾಕಿ, ಬಲಾತ್ಕಾರದಿಂದ ಕ್ಷಮಾಪಣೆಯನ್ನು ಪಡೆಯಲು ಯತ್ನಿಸಿದ್ದು ಪ್ರಶ್ನಾರ್ಹ. ಬುದ್ಧಿಜೀವಿಗಳು ಸಂಧಾನ, ಚರ್ಚೆಗಳ ಮೂಲಕ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಳ್ಳದೆ, ಮೂರನೇ ದರ್ಜೆಯ ತಂತ್ರಗಳನ್ನು ಉಪಯೋಗಿಸಲು ಪ್ರಾರಂಭಿಸಿದರೆ, ಅದು ದುರಂತ. ಅಲ್ಲದೇ, ಅವರೆಲ್ಲರೂ ಪ್ರತಿಪಾದಿಸುವ ವಾಕ್‌ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಅವರೇ ಕಲ್ಲು ಹಾಕಿದಂತಾಗುತ್ತದೆ.

ಜಮಿಯಾ ಮಿಲಿಯಾ ವಿವಿಯ ಪ್ರೊ. ಮುಶಿರುಲ್ ಹಸನ್, ರಶ್ದಿಯ 'ಸಟಾನಿಕ್ ವರ್ಸಸ್' ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯದಿಂದ, ಕಾಂಗ್ರೆಸ್‌ನ ಭಿನ್ನ ಗುಂಪುಗಳ ನಡುವೆ ಯುದ್ಧ ಪ್ರಾರಂಭವಾಗಿ (ಸಲ್ಮಾನ್ ಕುರ್ಷಿದ್ V/s. ಎಂಜೆ ಅಕ್ಬರ್) ವಿವಿ ಹತ್ತಿ ಉರಿದು, ಇನ್ನೂ ಒಳಗೊಳಗೇ ಹೊಗೆಯಾಡುತ್ತಿದೆ.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಹರೀಂದರ್‌ಸಿಂಗ್ ಮೊಹಬೂಬ್‌ರ ಪುಸ್ತಕ 'ಜನಾನ್ ದಿ ರಾತ್'ನ ಕವನವೊಂದರಲ್ಲಿ ದಿ. ಇಂದಿರಾಗಾಂಧಿಯನ್ನು ಅವಹೇಳನ ಮಾಡಿರುವ ವಾಕ್ಯಗಳಿವೆಯೆಂದು ಕಾಂಗ್ರೆ ಗೂಂಡಾಗಳು ಅಕಾಡೆಮಿಯ ಅಧಿಕಾರಿಯೊಬ್ಬನನ್ನು ಹೊಡೆದು, ನಂತರ ಸರ್ಕಾರಿ ಕೃಪಾಪೋಷಿತ ಬುದ್ಧಿಜೀವಿಗಳು ಅಕಾಡೆಮಿಯ ಸ್ವಾಯತ್ತತೆಯನ್ನೇ ರದ್ದು ಮಾಡಬೇಕೆಂದು ಒತ್ತಾಯಿಸಿದರು. ನಂತರ ತೀವ್ರ ವಿರೋಧದ ಅಲೆ ಎದ್ದು, ಅಕಾಡೆಮಿಯ ಸ್ವಾಯತ್ತತೆ ಉಳಿಯಿತು.

ಈ ಘಟನೆಗಳು ಹಸಿರಾಗಿರುವಾಗಲೇ, ಕಾರ್ನಾಡ್ ಪ್ರಕರಣ ನಡೆದಿದೆ. ನಮ್ಮ ಬುದ್ಧಿಜೀವಿಗಳು, ಅಕಾಡೆಮಿಗಳಂತಹ ಪ್ರತಿಷ್ಠಿತ ಜ್ಞಾನಮಂದಿರಗಳ ಕುರ್ಚಿಯಲ್ಲಿ ಕೂತವರು, ರಾಜಕಾರಣಿಗಳಂತೆ ಹೇಳಿಕೆ ನೀಡುವ ಚಪಲ ಬಿಡಬೇಕು. ಅಭಿಪ್ರಾಯ ಭೇದ ವ್ಯಕ್ತಪಡಿಸುವಿಕೆ, ಮುಕ್ತ ಸಮಾಜದಲ್ಲಿರಬೇಕಾದ ಆರೋಗ್ಯದ ಸೂಚನೆ. ಆದರೆ ಆದನ್ನು ವ್ಯಕ್ತಪಡಿಸಲು ಬಳಸುವ ಮಾರ್ಗ ಪ್ರಶ್ನಾರ್ಹವಾಗಿರಬಾರದು.

**ಮಿಂಚಿದ ಮೆಂಚು :**

ಗ್ವಾಟೆಮಾಲಾದ ಮೂಲನಿವಾಸಿಗಳ ಮೂಲಭೂತ ಹಕ್ಕುಗಳ ರಕ್ಷಣೆಗೆ ಹೋರಾಡುತ್ತಿರುವ 33 ವರ್ಷದ ರಿಗೋಬರ್ತ ಮೆಂಚುಗೆ ಈ ಸಲದ ನೋಬೆಲ್ ಶಾಂತಿ ಪ್ರಶಸ್ತಿ ಲಭಿಸಿದೆ.

ಎಂಟು ವರ್ಷದಿಂದಲೇ ತಂದೆಯ ಜೊತೆ ಹೊಲದಲ್ಲಿ ದುಡಿಯಲು ಪ್ರಾರಂಭಿಸಿದ ಮೆಂಚು, ಅವರಿವರ ತೋಟದಲ್ಲಿ, ಮನೆಗೆಲಸದಲ್ಲಿ ದುಡಿದು ಹೋರಾಟದಲ್ಲಿ ತೊಡಗಿ, ಬದುಕಿನಲ್ಲಿ ಕಳೆದುಕೊಂಡದ್ದು ಸ್ವಲ್ಪ ಅಲ್ಲ. ಸರ್ಕಾರಿ ಸೈನಿಕರ ಹಿಂಸೆಗೆ ಸಿಕ್ಕಿ ತಂದೆ/ ಸಹೋದರರಿಬ್ಬರ ಸಜೀವ ದಹನ. ತಾಯಿ ಸೈನಿಕರ ಅತ್ಯಾಚಾರದಿಂದ ಸತ್ತಳು, ಸಹೋದರಿಯರಿಬ್ಬರು ಗೆರಿಲ್ಲಾ ಸಂಘಟನೆಯಲ್ಲಿ ಸಕ್ರಿಯರು. ತಾಯಿನಾಡಿನ ಮಣ್ಣಿಗೂ ಮೆಂಚು ಎರವಾಗಬೇಕಾಯ್ತು. ಈಗ ಆಕೆ ಮೆಕ್ಸಿಕೋದಲ್ಲಿದ್ದಾಳೆ.

ಕೊಲಂಬಸ್ ಅಮೆರಿಕಾವನ್ನು ಕಂಡು ಹಿಡಿದು (?) 500 ವರ್ಷ ಆದ ಸಮಯ (ಅಕ್ಟೋಬರ್ 12, 1492)ದಲ್ಲಿ ಪ್ರಪಂಚದಾದ್ಯಂತ ಜನಪರ ಸಂಘಟನೆಗಳು ಅಮೆರಿಕಾದ ಬಿಳಿಯರ ವಸಾಹತು ಶಾಹಿಯನ್ನು ವಿರೋಧಿಸುತ್ತಿರುವಾಗ ಮೆಂಚುಗೆ ನೋಬೆಲ್ ಪ್ರಶಸ್ತಿ ನೀಡಿದ್ದು, ಮೂಲನಿವಾಸಿಗಳ ಹಕ್ಕನ್ನು ವಿಶ್ವಮಾನ್ಯಮಾಡಿದಂತಾಗಿದೆ. ಮೂಲ ನಿವಾಸಿಗಳ ಹಕ್ಕಿನ ಬಗ್ಗೆ ಬಾಯುಪಚಾರ ಮಾಡುವ ನಮ್ಮ ಸರ್ಕಾರ, ಏನು ಮಾಡುತ್ತಿದೆ ? ಮೆಂಚುಗೆ ಪ್ರಶಸ್ತಿ ಸಿಕ್ಕಿದ ಸಂದರ್ಭದಲ್ಲಿ ನಡೆದ ಇಂಡಿಯನ್ ಮೂಲನಿವಾಸಿಗಳ ಸಭೆಯೆಲ್ಲಿನ ಬ್ಯಾನರ್ ಇದು—"ಅವರು ನಮ್ಮ ಗಿಡದಲ್ಲಿದ್ದ ಹಣ್ಣುಗಳನ್ನು ಕಿತ್ತರು, ಟೊಂಗೆಗಳನ್ನು ಕತ್ತರಿಸಿದರು, ಕಾಂಡವನ್ನು ಸುಟ್ಟರು, ಆದರೆ ನಮ್ಮ ಬೇರನ್ನು ನಾಶಮಾಡಲು ಅವರಿಗೆ ಸಾಧ್ಯವಾಗಲಿಲ್ಲ." ಮಾನವನ ಹೃದಯದಾಳದ ಸ್ವಾತಂತ್ರ್ಯಾಕಾಂಕ್ಷೆ ಸುಲಭವಾಗಿ ಆರುವಂಥದ್ದಲ್ಲ, ಆದರೆ ಅದು ಪ್ರಕಾಶಮಾನವಾಗಿ ಬೆಳಗಲು ಮೆಂಚುವಂತಹವರು ಬೇಕು, ಅವರ ಸಂಖ್ಯೆ ಹೆಚ್ಚಲಿ.

**ಪ್ರಶಸ್ತಿಗಳು ಮತ್ತು ಹಿರಿಯರು :**

ಕುವೆಂಪು ಮತ್ತು ಡಾ॥ ರಾಜಕುಮಾರ್ ಅವರಿಗೆ ಸರ್ಕಾರ ಹೊಸದಾಗಿ ಸ್ಥಾಪಿಸಿದ ಕರ್ನಾಟಕ ರತ್ನ ಪ್ರಶಸ್ತಿ ನೀಡಿದೆ, ಇವರಿಬ್ಬರ ಬಗೆಗೆ ನಮಗೆಲ್ಲಾ ಗೌರವವಿದೆ, ಹೆಮ್ಮೆ ಇದೆ. ಇವರಿಬ್ಬರ ಕುತ್ತಿಗೆಗಳು ಪ್ರಶಸ್ತಿಗಳಿಂದ ಬಗ್ಗಿಹೋಗಿದ್ದರೂ ಈ ಪ್ರಶಸ್ತಿಗಳ ನಾಟಕ ನಡೆಯುತ್ತಲೇ ಇರುತ್ತದೆ. ಕಡ್ಲೆಪುರಿ ಹಾಗೆ ಹಂಚಿದ ಈ ಸಲದ ರಾಜ್ಯೋತ್ಸವ ಪ್ರಶಸ್ತಿಯನ್ನು ಸಾಹಿತಿ ಶಾಂತರಸರು ನಿರಾಕರಿಸಿದ್ದು ಸರ್ಕಾರಕ್ಕೆ ಸಂದ ಯೋಗ್ಯ ಪ್ರತಿಭಟನೆ. ಇದೇ ರೀತಿ ಕಾರಂತರು ಪಂಪ ಪ್ರಶಸ್ತಿಯ ಸಂದರ್ಭದಲ್ಲಿ ಪ್ರತಿಭಟಿಸಿದ್ದರೆ ಜಡವಾಗಿದ್ದ ಕರ್ನಾಟಕಕ್ಕೆ ಚುರುಕು ಮುಟ್ಟಿಸಬಹುದಿತ್ತು.

**ನಿಂತು ಹೋದ ಚಂಡೆ ಮದ್ದಳೆ :**

ಕಳೆದ ಸಂಚಿಕೆಯಲ್ಲಿ ಅಡಿಗರ ಸಂದರ್ಶನ ಬಂದಿತ್ತು. ಬಹುಶಃ ಅದೇ ಅವರ ಕೊನೆಯ ಸಂದರ್ಶನವಾದೀತೆಂದು ನಾವು ಊಹಿಸಿರಲಿಲ್ಲ. ಅವರ ದೇಹದ ಆರೋಗ್ಯ ಸೂಕ್ಷ್ಮವಾಗಿದ್ದರೂ, ನಾವು ಕೇಳಿದ ಅನೇಕ ಪ್ರಶ್ನೆಗಳಿಗೆ ಕೆಲವು ಕಡೆ ತೀಕ್ಷ್ಣವಾಗಿ, ಖಾರವಾಗಿ ಅಷ್ಟೇ ಆತ್ಮೀಯವಾಗಿ ಉತ್ತರ ಕೊಟ್ಟಿದ್ದರು, ಕೇಳಬೇಕೆಂದಿದ್ದ ಅನೇಕ ಪ್ರಶ್ನೆ ನಮ್ಮಲ್ಲಿನ್ನೂ ಹಾಗೇ ಉಳಿದಿತ್ತು. ಅನಾರೋಗ್ಯ ವೃದ್ಧಾಪ್ಯದಲ್ಲೂ ತಮ್ಮ ಸ್ವಾಭಿಮಾನ ಬಿಡದ ನಿರಂತರ ಕಾವ್ಯಪ್ರಯೋಗಪರರಾದ ಅಡಿಗರನ್ನು ಕನ್ನಡ ಕಾವ್ಯ ಕಳೆದುಕೊಂಡಿದೆ, ಅಡಿಗರಿಗೆ ನಾವು, ಅವರ ಬ್ಲಾಕ್ ಅಂಡ್ ವೈಟ್ ಫೋಟೋ ತೆಗೆಯುವುದಾಗಿ ಮಾಡಿದ್ದ ಪ್ರಾಮಿಸ್ ಹಾಗೇ ಉಳಿದಿತ್ತು, ಅವರು ನಿಧನ ಹೊಂದಿದ ಸುದ್ದಿ ಬಿತ್ತರಿಸಿದ ಪತ್ರಿಕೆಗಳಲ್ಲಿ ಅಡಿಗರ ಕಪ್ಪು ಬಿಳುಪು ಫೋಟೋ ನಮ್ಮನ್ನ ನೋಡಿ ನಕ್ಕಹಾಗಿತ್ತು.

**ಅಗಲಿದ ಇನ್ನಿಬ್ಬರು :**

ಸಾವಿರ ಹಾಡುಗಳ ಸರದಾರ ಎನಿಸಿಕೊಂಡ, ಜನರ ಮನದಲ್ಲಿ ಸ್ಥಾಯಿಯಾಗಿ ನಿಂತ, ಹುಕ್ಕೇರಿ ಬಾಳಪ್ಪನವರ ಕಂಠ ನಿಂತುಹೋಯಿತು. ಸರಳ ನಿಗರ್ವಿ ಹಿರಿಯ ಗಾಯಕರನ್ನು ನಾವು ಕಳೆದುಕೊಂಡಿದ್ದೇವೆ.

ಸಾವನ್ನು ಕುರಿತು ಮಾತನಾಡುತ್ತಲೇ ಸಾವಿನ ಜೊತೆಗೂಡಿದ ಪೊಲಂಕಿ ರಾಮ ಮೂರ್ತಿ, ತೀರಾ ವಿವಾದಾತ್ಮಕ ವ್ಯಕ್ತಿಯಾದ್ದರು. ಅವರ ಸೀತಾಯಣದ ವಿವಾದ, ಪ್ರತಿಭಟನೆಗಳು ಅವರ ಅನೇಕ ಅತಿರೇಕದ ನಿಲುವುಗಳು ದಿಟ್ಟ ಮಾತುಗಳು ಪ್ರತಿಭೆ ಪಾಂಡಿತ್ಯಗಳೆಲ್ಲವೂ ಅವರ ಸಾವಿನ ನಂತರದ ನೆನಪಿನ ಮೆರವಣಿಗೆಯಲ್ಲಿ ಸಾಲಾಗಿ ಸಾಗುತ್ತವೆ.

---

ಈ ಸಂಚಿಕೆಯ ಕಲಾವಿದ ಎ. ಶ್ರೀಧರಮೂರ್ತಿಯವರು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಚಿತ್ರಕಲೆಯ ಪದವಿ ಪಡೆದು, ಬರೋಡದ ಎಂ. ಎಸ್. ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಪ್ರಸ್ತುತ ಬೆಂಗಳೂರಿನ ಕಾಲೇಜ್ ಆಫ್ ಫೈನ್ ಆರ್ಟ್ಸ್‌ನ ಪ್ರಿಂಟ್‌ಮೇಕಿಂಗ್ ವಿಭಾಗ ದಲ್ಲಿ ಉಪನ್ಯಾಸಕರಾಗಿದ್ದು, ಜೊತೆಗೆ ಚಿತ್ರಕಲೆಯಲ್ಲಿ ಗಂಭೀರವಾಗಿ ತಮ್ಮನ್ನ ತೊಡಗಿಸಿಕೊಂಡಿದ್ದಾರೆ, ಇವರ ಅನೇಕ ಕೃತಿಗಳು ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರದರ್ಶನಗಳಲ್ಲಿ ಪ್ರದರ್ಶಿತವಾಗಿದ್ದು ದೇಶದ ಎಲ್ಲ ಪ್ರಮುಖ ಸಂಗ್ರಹಗಳಲ್ಲಿದೆ.

---

# ಗ್ರಾಫಿಕ್ ಮಾಧ್ಯಮವನ್ನು ಕುರಿತು

ಗ್ರಾಫಿಕ್ ಎಂಬುದು ಪೇಂಟಿಂಗ್‌ನಂತೆಯೇ ಒಂದು ದೃಶ್ಯ ಮಾಧ್ಯಮ, ಗ್ರಾಫಿಕ್‌ನಲ್ಲಿ ಕಲಾವಿದನೇ ಸ್ವಹಸ್ತದಿಂದ ನಿರ್ಮಿಸಿದ ಅಚ್ಚನ್ನು ಉಪಯೋಗಿಸಿ ನಿಗದಿತ ಸಂಖ್ಯೆಯ ಪ್ರತಿಗಳನ್ನು ಮುದ್ರಿಸುವ ಒಂದು ತಂತ್ರ. ತೆಗೆದ ಎಲ್ಲ ಪ್ರತಿಯಲ್ಲೂ ಕಲಾವಿದನ ಸಹಿಯಿದ್ದು, ಎಷ್ಟು ಪ್ರತಿಗಳನ್ನು ತೆಗೆಯಲಾಗಿದೆ ಆ ಪ್ರತಿ ಎಷ್ಟನೆಯದು (25 ಪ್ರತಿಗಳನ್ನು ಮುದ್ರಿಸಿದರೆ $\frac{1}{25}$ ರಿಂದ $\frac{25}{25}$ ರವರೆಗೆ) ಎಂದು ಬರೆಯುತ್ತಾರೆ. ಹೀಗಾಗಿ ಆ ಪ್ರತಿಗಳಿಗೆ ಮೂಲ ಕೃತಿಯೊಂದರ ಬೆಲೆ ಬರುತ್ತದೆ. ಸಹಿ ಮತ್ತು ಸಂಖ್ಯೆ ಇರಲೇಬೇಕೆಂಬುದು ಅಂತರರಾಷ್ಟ್ರೀಯ ನಿಯಮ. ಅದಿಲ್ಲದೆ ಗ್ರಾಫಿಕ್ ಕೃತಿಗೆ ಬೆಲೆಯಿಲ್ಲ. ಕೃತಿ ಅನೇಕ ಪ್ರತಿಗಳಲ್ಲಿರುವುದರಿಂದ ಅದನ್ನು ಪೇಂಟಿಂಗ್‌ಗಿಂತ ಕಡಿಮೆ ಬೆಲೆಗೆ ಮಾರಲು ಮತ್ತು ಅಗ್ಗವಾದ್ದರಿಂದ ಹೆಚ್ಚು ಜನರನ್ನು ಕೃತಿ ತಲುಪಲು ಸಾಧ್ಯ. ಗ್ರಾಫಿಕ್‌ನಲ್ಲಿ ಲಿನೋಕಟ್, ಎಚ್ಚಿಂಗ್, ಲಿಥೋಗ್ರಾಫಿ ಸೆರಿಗ್ರಾಫಿ ಎಂದು ವಿವಿಧ ತಂತ್ರಗಳುಂಟು.

ಲಿನೋಲಿಯಮ್ ಎಂಬುದು ಸಮತಟ್ಟಾದ ರಬ್ಬರ್ ಹಾಳೆ. ಅದರಲ್ಲಿ ಕಲಾವಿದ ಮುಂಚೆ ತನ್ನ ಚಿತ್ರವನ್ನು ಕಪ್ಪು ಶಾಯಿಯಿಂದ ಅಂಕಿಸಿಕೊಳ್ಳುತ್ತಾನೆ. ನಂತರ ಯಾವ ಭಾಗವು ಮುದ್ರಿತವಾಗಬಾರದೊ ಅದನ್ನು ಚೂಪಾದ ವಿವಿಧ ಆಕಾರದ ಉಪಕರಣಗಳಿಂದ ಕೆತ್ತಿ ತೆಗೆಯುತ್ತಾನೆ. ಹೀಗೆ ಕೆತ್ತಿ ತೆಗೆದಾದ ಲಿನೋವಿನ ಮೇಲೆ ರೋಲರ್‌ನಿಂದ ಇಂಕನ್ನು ಹಚ್ಚಿದಾಗ ಮೇಲ್ಮಟ್ಟದಲ್ಲಿ ಉಳಿದ (ಕೆತ್ತದೇ ಉಳಿದ) ಭಾಗಗಳು ಮಾತ್ರ ಇಂಕನ್ನು ಪಡೆದು, ಮಿಕ್ಕಿದ (ಕೆತ್ತಿ ತೆಗೆದ) ಭಾಗಗಳು ಬಿಳಿಯಾಗಿ ಉಳಿಯುತ್ತವೆ. ನಂತರ ಅದರ ಮೇಲೆ ಪೇಪರೊಂದನ್ನು ಇಟ್ಟು ಹಿಂಬದಿಯಿಂದ ಉಜ್ಜಿದಾಗ ಅಥವಾ ಭಾರವಾದ ರೋಲರ್‌ಗಳ ಮಧ್ಯದಲ್ಲಿ ಹಾಯಿಸಿದಾಗ ಇಂಕ್ ಪೇಪರಿಗೆ ವರ್ಗವಾಗುತ್ತದೆ. ಈ ರೀತಿ ಅನೇಕ ಪ್ರತಿಗಳನ್ನು ತೆಗೆಯಬಹುದು. ನಂತರ ಅದನ್ನು ಒಣಗಿಸಿ ಸಹಿ ಮತ್ತು ಇತರ ವಿವರಗಳನ್ನು ಬರೆಯುತ್ತಾರೆ. ಇದು ಲಿನೋಕಟ್ ತಂತ್ರ.

ನಾವಿಲ್ಲಿ ಸಂಚಯದಲ್ಲಿ ಮುಂಬರುವ (ಈ ಸಂಚಿಕೆಯೂ ಸೇರಿದಂತೆ) ಸಂಚಿಕೆಗಳಲ್ಲಿ ನೀಡುವ ಲಿನೋಕಟ್‌ಗಳು ಇದೇ ತಂತ್ರದಲ್ಲಿ ಸೃಷ್ಟಿಯಾಗಿದ್ದು ಕಲಾವಿದರ ಸಹಿ ಹೊಂದಿದ ಮೂಲಕೃತಿಯಾಗಿದೆ. ಇವನ್ನು ನೀವು ಪುಸ್ತಕದಿಂದ ಬೇರ್ಪಡಿಸಿ ಅಂದಾದ ಕಟ್ಟಿನಲ್ಲಿ ನಿಮ್ಮ ಮನೆಯಲ್ಲಿ ಪ್ರದರ್ಶಿಸಬಹುದು. ಇದೇ ಕೃತಿಗಳನ್ನು ನೀವು ಬೇರೆಡೆ ಕೊಂಡಲ್ಲಿ ಪ್ರತಿಯೊಂದು ಕೃತಿಯ ಮೌಲ್ಯ ಸುಮಾರು 500 ರೂ.ಗಳು ಆರು ಜನ ಸಮಕಾಲೀನ ಕಲಾವಿದರ ಮೂರು ಸಾವಿರ ರೂ. ಮೌಲ್ಯದ ಆರು ಕೃತಿಗಳನ್ನು ಮುಂದಿನ ಒಂದು ವರ್ಷದ ಆರು ಸಂಚಿಕೆಗಳಲ್ಲಿ ನಿಮಗೆ ನೀಡಲಿದ್ದೇವೆ. ಉಚಿತ!

## ಈ ಸಂಚಯದಲ್ಲಿ....



ಈ ಸಂಚಿಕೆಯೊಂದಿಗೆ ನಿಮಗೆ ಒಂದು ಲಿನೋಕೃತಿ
ವಿಶೇಷ ಕೊಡುಗೆ

ಸಂಚಯ, 24/ಡಿ. 17ನೇ ಮುಖ್ಯ ರಸ್ತೆ,
ಮುನೇಶ್ವರ ಬ್ಲಾಕ್, ಬೆಂಗಳೂರು-560 026